ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ — ೨೧

# ಸಾರ್ವಜನಿಕ ವೆಚ್ಚ

ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೫೦

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚುಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೧೫—೮—೧೯೪೦.

**ಎನ್. ಎಸ್. ಸುಬ್ಬರಾವ್.**

# ಅರಿಕೆ

ಈ ಪುಸ್ತಕಮಾಲೆಯಲ್ಲಿ ಮೂರನೆಯದಾದ " ತೆರಿಗೆ " ಯಲ್ಲಿ ನನ್ನ ಮಿತ್ರರಾದ ಬಿ. ಆರ್. ಸುಬ್ಬರಾಯರು ಸಾರ್ವಜನಿಕ ಸಂಸ್ಥೆಗಳ ಆದಾಯದ ರೀತಿಯನ್ನು ವಿವರಿಸಿರುತ್ತಾರೆ. ಬಂದ ವರಮಾನವನ್ನು ಈ ಸಂಸ್ಥೆಗಳು ಹೇಗೆ ವೆಚ್ಚಮಾಡುತ್ತವೆ ಮತ್ತು ಮಾಡಬೇಕು ಎಂಬ ವಿಷಯವನ್ನು ಇಲ್ಲಿ ವಿವರಿಸಿದೆ. ತೆರಿಗೆ ಮತ್ತು ವೆಚ್ಚ ಇವು ಒಂದಕ್ಕೊಂದು ಅಂಟಿಕೊಂಡಂತಿವೆ; ಒಂದನ್ನು ತಿಳಿಯದೆ ಮತ್ತೊಂದನ್ನು ತಿಳಿದುಕೊಳ್ಳುವುದಕ್ಕಾಗು ವುದಿಲ್ಲ. ಒಂದು ಸಮಾಜದ ಸ್ಥಿತಿಮಿತತೆಗೂ ಏಳಿಗೆಗೂ ಅದರ ಸರ್ಕಾರದ ಆಯವ್ಯಯದ ರೀತಿಯು ಬಹು ಮುಖ್ಯಕಾರಣ.

ಕಳೆದ ಬೇಸಗೆಯಲ್ಲಿ ನಾನು ತುಮಕೂರಿನಲ್ಲಿ ಕೊಟ್ಟ ಎರಡು ಉಪನ್ಯಾಸಗಳನ್ನು ವಿಸ್ತರಿಸಿ ಈಗ ಈ ಪುಸ್ತಕವನ್ನು ಬರೆದಿದ್ದೇನೆ. ಇದನ್ನು ಪ್ರಕಟಿಸಿದ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೂ ಇದನ್ನು ಬರೆಯಲು ಅನೇಕ ವಿಧಗಳಲ್ಲಿ ಸಹಾಯಮಾಡಿದ ನನ್ನ ಸ್ನೇಹಿತರಾದ ಪಂಡಿತ ರಾಮಾನುಜ ಚಕ್ರವರ್ತಿಗಳಿಗೂ ಶ್ರೀಮಾನ್ ಜಿ. ಹನುಮಂತರಾಯರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

ಮೈಸೂರು,<br>೨೫–೯–೧೯೪೦.

ಎಂ. ಎಚ್. ಗೋಪಾಲ್.

## ವಿಷಯಾನುಕ್ರಮಣಿಕೆ


ಅಧ್ಯಾಯ ೧

ಉದ್ದೇಶ .... .... ೧

ಅಧ್ಯಾಯ ೨

ವಿಂಗಡಣೆ ಮತ್ತು ಬೆಳವಣಿಗೆ .... ೮

ಅಧ್ಯಾಯ ೩

ಖರ್ಚಿನ ಬಾಬುಗಳು ಮತ್ತು ಅವುಗಳ ನಿರ್ಧಾರ .... ೧೯

ಅಧ್ಯಾಯ ೪

ಪರಿಣಾಮ .... .... ೩೨

ಅಧ್ಯಾಯ ೫

ಇಂಡಿಯಾದೇಶದ ವೆಚ್ಚ .... .... ೪೦

ಅಧ್ಯಾಯ ೬

ಮೈಸೂರಿನ ವೆಚ್ಚ .... .... ೪೭

# ಸಾರ್ವಜನಿಕ ವೆಚ್ಚ

## ಅಧ್ಯಾಯ ೧

### ಉದ್ದೇಶ

ನಾವು ಮೈಸೂರು ಸರ್ಕಾರದ ಪ್ರಜೆಗಳು. ನಿರ್ದಿಷ್ಟವಾದ ಎಲ್ಲೆಯುಳ್ಳ ಸಂಸ್ಥಾನದ ನಿವಾಸಿಗಳು. ಸರ್ಕಾರದ ಕಾಯಿದೆಗಳ ಆಸರೆಯಲ್ಲಿ ನಮ್ಮ ಹಕ್ಕುಬಾಧ್ಯತೆಗಳನ್ನು ಅನುಭವಿಸುತ್ತಿರುವೆವು. ಸರ್ಕಾರಕ್ಕೆ ಕೊಡಬೇಕಾದ ತೆರಿಗೆಗಳನ್ನು ಕೊಟ್ಟು ಅದರಿಂದ ನಮಗೆ ದೊರೆಯಬೇಕಾದ ಶಾಂತಿಸೌಖ್ಯಗಳನ್ನು ಪಡೆಯುತ್ತಿದ್ದೇವೆ. ನಮ್ಮ ಹಾಗೆಯೇ ಇತರ ದೇಶದ ಜನರೂ ಅವರವರ ಸರ್ಕಾರಗಳ ಪ್ರಜೆಗಳಾಗಿರುತ್ತಾರೆ. ಸರ್ಕಾರವೆಂಬುದು ಸಾರ್ವಜನಿಕಸಂಸ್ಥೆಗಳಲ್ಲಿ ಬಹು ದೊಡ್ಡದು ಮತ್ತು ಕೇಂದ್ರಪ್ರಾಯವಾದುದು. ಇದರ ಅಂಗವಾಗಿ ಮತ್ತು ಇದಕ್ಕೆ ನೆರವಾಗಿ ಅನೇಕ ಇತರ ಸಾರ್ವಜನಿಕಸಂಸ್ಥೆಗಳಿವೆ. ಈ ವಿಧವಾದ ಅಂಗಸಂಸ್ಥೆಗಳೇ ಡಿಸ್ಟ್ರಿಕ್ಟ್‌ಬೋರ್ಡು, ಮ್ಯುನಿಸಿಪಾಲಿಟಿ, ಗ್ರಾಮಪಂಚಾಯತಿ ಮೊದಲಾದುವು. ಇವೂ ಸಾರ್ವಜನಿಕ ಸಂಸ್ಥೆಗಳೇ. ಇವೆಲ್ಲಾ ಅನೇಕ ಬಗೆಗಳಲ್ಲಿ—ಅಂದರೆ ನೀರಾವರಿ ವಸತಿಗಳು, ವಿದ್ಯಾಭ್ಯಾಸಾನುಕೂಲಗಳು, ಆರೋಗ್ಯ ಮತ್ತು ವೈದ್ಯಸೌಕರ್ಯಗಳು, ವಿನೋದ ವಿಹಾರಸ್ಥಳಗಳು—ಇವುಗಳಿಗಾಗಿ ಹಣವನ್ನು ವೆಚ್ಚಮಾಡುತ್ತಿವೆ. ಈ ವಿಧವಾಗಿ ಮಾಡಿದ ವೆಚ್ಚಕ್ಕೆ ಸಾರ್ವಜನಿಕ ವೆಚ್ಚವೆಂದು ಹೆಸರು. ಇವುಗಳಲ್ಲೆಲ್ಲಾ ಸರ್ಕಾರ ಮಾಡುವ ವೆಚ್ಚವೇ ಅತಿ ಮುಖ್ಯವಾದು

ದರಿಂದ ಸಾರ್ವಜನಿಕ ವೆಚ್ಚವೆಂದರೆ ಸಾಮಾನ್ಯವಾಗಿ ಸರ್ಕಾರವು ಮಾಡುವ ಖರ್ಚು ಮಾತ್ರವೆಂದೇ ತಿಳಿವಳಿಕೆಯಾಗಿದೆ. ಆದರೆ ತತ್ತ್ವದೃಷ್ಟಿಯಿಂದ ಪಂಚಾಯತಿಗಳಿಂದ ಹಿಡಿದು ಸಂಯುಕ್ತ ರಾಜ್ಯಾಂಗ ಸಂಸ್ಥೆಗಳ ವರೆಗೂ ಎಲ್ಲ ಸಾರ್ವಜನಿಕ ಸಂಸ್ಥೆಗಳು ಮಾಡುವ ಖರ್ಚೂ ಸಾರ್ವಜನಿಕ ವೆಚ್ಚವೇ. ಇವುಗಳಲ್ಲಿ ಸಣ್ಣ ಪುಟ್ಟ ವ್ಯತ್ಯಾಸಗಳಿರಬಹುದು. ಮುಖ್ಯವಾಗಿ ಅವುಗಳ ತಳಹದಿಯಾದ ತತ್ತ್ವವೊಂದೇ.

ಪ್ರಜಾಸಾಮಾನ್ಯದ ಏಳಿಗೆಗಾಗಿ ದುಡಿಯುವುದೇ ಸಾರ್ವಜನಿಕಸಂಸ್ಥೆಗಳ ಮುಖ್ಯಧ್ಯೇಯ. ಸಾಮಾನ್ಯವಾಗಿ ಯಾವ ವ್ಯಕ್ತಿಯೂ ತನ್ನೊಬ್ಬನ ಶಕ್ತಿಪ್ರಯತ್ನಗಳಿಂದಲೇ ತನ್ನ ಜೀವ ಆಸ್ತಿ ಸ್ವಾತಂತ್ರ್ಯಗಳನ್ನು ಕಾಪಾಡಿಕೊಳ್ಳುವುದಕ್ಕಾಗುವುದಿಲ್ಲ. ಇವುಗಳನ್ನು ಸಾಧಿಸಲು ಸಾಮೂಹಿಕಶಕ್ತಿ ಆವಶ್ಯಕ. ಅವುಗಳನ್ನು ಗಳಿಸಲು ನಾವೊಬ್ಬೊಬ್ಬರೂ ನಮ್ಮ ವ್ಯಕ್ತಿಸ್ವಾತಂತ್ರ್ಯದಲ್ಲಿ ಅಲ್ಪಸ್ವಲ್ಪವನ್ನು ಬಿಟ್ಟುಕೊಡಲು ಸಿದ್ಧರಾಗಿರಬೇಕು. ಸರ್ಕಾರವು ಜನರ ಸಾಮೂಹಿಕಶಕ್ತಿಯಿಂದ ಹುಟ್ಟಿದ ಸಂಸ್ಥೆ. ಇದು ಇರುವುದು ಜನರ ಸ್ವಾತಂತ್ರ್ಯಸೌಖ್ಯಗಳನ್ನು ಕಾಪಾಡುವುದಕ್ಕಾಗಿಯೇ ಹೊರತು ತಾನೇತಾನಾಗಿರುವುದಕ್ಕಲ್ಲ. ಆದುದರಿಂದ ಅದು ಕೈಕೊಳ್ಳುವ ಖರ್ಚಿನ ಉದ್ದೇಶವೆಲ್ಲ ಜನರ ಅಭ್ಯುದಯವೇ ಆಗಿದೆ. ಪ್ರಜೆಗಳ ಅಭ್ಯುದಯವೇ ಸರ್ಕಾರದ ವೆಚ್ಚಕ್ಕೆ ಒರೆಗಲ್ಲು.

ಈ ಉದ್ದೇಶವನ್ನು ಎಲ್ಲರೂ ಒಪ್ಪಿದರೂ ಅದರ ಸಾಧನೆಯ ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿವೆ. ಕೆಲವರು ಅಂದರೆ ವ್ಯಕ್ತಿಸ್ವಾತಂತ್ರ್ಯವಾದಿಗಳು, ಸರ್ಕಾರವು ಜನರ ಜೀವನದಲ್ಲಿ

ಹೆಚ್ಚಾಗಿ ಪ್ರವೇಶಿಸದಿದ್ದರೆ ಪ್ರತಿವ್ಯಕ್ತಿಯ ಸ್ವಾತಂತ್ರ್ಯವೂ ಸುಖವೂ ಒಟ್ಟು ಸಮಾಜದ ಸೌಕರ್ಯಗಳೂ ಹೆಚ್ಚು ವುವಲ್ಲದೆ ಸರ್ಕಾರದ ಕೆಲಸವೂ ಮಿತವಾಗಿರುತ್ತದೆ; ಅದರ ವೆಚ್ಚವೂ ಮಿತವಾಗಿರುತ್ತದೆ ಎಂದು ಹೇಳುವರು. "ತೆರಿಗೆಗಳೂ ಕಡಮೆ, ವೆಚ್ಚವೂ ಕಡಮೆ" ಎಂಬುದೇ ವ್ಯಕ್ತಿಸ್ವಾತಂತ್ರ್ಯ ವಾದಿಗಳ ಸೂತ್ರ. ಈ ವಿಧವಾದ ಸಾರ್ವಜನಿಕ ವೆಚ್ಚದ ನೀತಿಯು ಹತ್ತೊಂಭತ್ತನೆಯ ಶತಮಾನದಲ್ಲಿ ಯೂರೋಪು ರಾಷ್ಟ್ರಗಳಲ್ಲಿ ಆಚರಣೆಯಲ್ಲಿತ್ತು. ಈ ಶತಮಾನದ ಆದಿಯಲ್ಲೂ ಇದನ್ನು ಸ್ವಲ್ಪಮಟ್ಟಿಗೆ ಕಾಣಬಹುದು.

ಮತ್ತೆ ಕೆಲವು ಅರ್ಥಶಾಸ್ತ್ರಜ್ಞರು ಸರ್ಕಾರಕ್ಕೆ ಸರ್ವ ಸ್ವಾತಂತ್ರ್ಯವನ್ನು ವಹಿಸಿಕೊಟ್ಟು ಅದರ ಬಲದಿಂದಲೇ, ಅದರ ಪ್ರಯತ್ನದಿಂದಲೇ ಪ್ರತಿ ವ್ಯಕ್ತಿಯೂ ಸಮಸ್ತ ಶ್ರೇಯೋಭಿವೃದ್ಧಿಯನ್ನು ಪಡೆಯಲು ಸಾಧ್ಯವೆಂದು ವಾದಿಸುವರು. ಇವರನ್ನು ಸಮಾಜವಾದಿಗಳೆಂದು ಕರೆಯಬಹುದು. ಈ ಸಮಾಜವಾದಿಗಳ ಅಭಿಪ್ರಾಯವನ್ನು ಒಪ್ಪಿದರೆ, ರಕ್ಷಣೆ ಮತ್ತು ಪಾಲನೆಯ ಕೆಲಸಗಳೆಲ್ಲವನ್ನೂ ಸರ್ಕಾರವೇ ಕೈಕೊಳ್ಳಬೇಕೆಂದು ಹೇಳಿದಹಾಗಾಗುತ್ತದೆ. ಈ ವಾದವನ್ನು ಒಪ್ಪಿದರೆ ಸರ್ಕಾರದ ಕೆಲಸವೂ ಹೆಚ್ಚುವುದು, ಅದರ ವೆಚ್ಚವೂ ಹೆಚ್ಚುವುದು. ಸರ್ಕಾರವು ಜನರ ಅಭಿವೃದ್ಧಿಗಾಗಿ ಶ್ರಮಿಸುವುದೂ ಅದಕ್ಕಾಗಿ ಹೆಚ್ಚು ಹೆಚ್ಚಾಗಿ ಹಣವನ್ನು ವ್ಯಯಮಾಡುವುದೂ ಅಪೇಕ್ಷಣೀಯ ಮತ್ತು ಅನಿವಾರ್ಯ ಎಂದು ಹೇಳಬೇಕಾಗುವುದು.

ಈ ಎರಡು ಮತದವರೂ ಆವಶ್ಯಕವಾದ ಒಂದೊಂದು ಅಂಶವನ್ನು ಅತಿಯಾಗಿ ಒತ್ತಿ ಹೇಳುತ್ತಿದ್ದಾರೆ. ವ್ಯಕ್ತಿ ಸ್ವಾತಂತ್ರ್ಯ

ಬೇಡವೆಂದು ಹೇಳುವವರು ಯಾರಾದರೂ ಉಂಟೇ? ಆದರೆ ಅದನ್ನೇ ಅತಿಯಾಗಿ ಅವಲಂಬಿಸಿದರೆ ಕೊನೆಯಲ್ಲಿ ಅಸಂಖ್ಯಾತರಾದ ಜನರ ಸ್ವಾತಂತ್ರ್ಯಕ್ಕೇ ಚ್ಯುತಿ ಬರಬಹುದು. ಸರ್ಕಾರವಿರುವುದು ಜನರ ಹಿತಕ್ಕಾಗಿ ಎಂಬುದನ್ನು ಯಾರೂ ಇಲ್ಲವೆನ್ನುವ ಹಾಗಿಲ್ಲ. ಆದರೆ ಹಿತದ ಕಾರ್ಯಗಳೆಲ್ಲಾ ಅದರ ಪ್ರಯತ್ನದಿಂದಲೇ ನಡೆಯಬೇಕು ಎಂದು ಹೇಳಿದರೆ ಕೊನೆಗೆ ಜನರು ಅಶಕ್ತರೂ ಸ್ವಾವಲಂಬನವಿಲ್ಲದವರೂ ಆಗಿಬಿಡಬಹುದು. ಆದುದರಿಂದ ಇವೆರಡೂ ಸಾಧುವಲ್ಲ. ಯಾವ ಸರ್ಕಾರವೇ ಆಗಲಿ ತನ್ನ ಪ್ರತಿಷ್ಠೆಗಾಗಿಯೇ ಜನರ ಸ್ವಾತಂತ್ರ್ಯವನ್ನು ತಡೆಗಟ್ಟಕೂಡದು. ಆದರೆ ಏನೂಮಾಡದೆ ತಟಸ್ಥವಾಗಿಯೂ ಇರಕೂಡದು. ಅದು ಜನರ ಸ್ವಾತಂತ್ರ್ಯವನ್ನೂ ಕಾಪಾಡಬೇಕು; ಅವರ ಸುಖಸಂಪತ್ತುಗಳನ್ನು ಪಾಲಿಸಲು ಅನೇಕ ಉದ್ಯಮಗಳನ್ನೂ ಕೈಕೊಳ್ಳಬೇಕು. ಯಾವುದು ಪ್ರಜೆಗಳಿಗೆ ಸೌಖ್ಯದಾಯಕವೋ ಅದನ್ನು ಸಾಧಿಸಬೇಕಾದುದು ಸರ್ಕಾರದ ಕರ್ತವ್ಯವಾಗುವುದು. ಪ್ರಜೆಗಳ ಶಾಂತಿ ನೆಮ್ಮದಿಗಳಿಗೆ ಚ್ಯುತಿಬರದಂತೆ ನೋಡಿಕೊಳ್ಳುವುದೂ ಅವರ ಸೌಖ್ಯವನ್ನು ದಿನದಿನಕ್ಕೂ ಹೆಚ್ಚಿಸುವುದೂ ಸರ್ಕಾರದ ಕೆಲಸಗಳು. ಶಾಂತಿ ನೆಮ್ಮದಿಗಳಿಗೆ ಸಹಾಯಕವಾದ ಸೈನ್ಯ, ಪೋಲೀಸ್ ಸಿಬ್ಬಂದಿ, ನ್ಯಾಯಸ್ಥಾನಗಳು ಇವೆಲ್ಲವನ್ನೂ ಸರ್ಕಾರವು ಸ್ಥಾಪಿಸಿ ಅವಕ್ಕಾಗಿ ಹಣವನ್ನು ವೆಚ್ಚಮಾಡಬೇಕು. ದೇಶದ ಆರ್ಥಿಕಾಭಿವೃದ್ಧಿಗೆ ಬೇಕಾದ ಯಂತ್ರಸಲಕರಣೆಗಳನ್ನೂ ಯಂತ್ರಶಕ್ತಿಯನ್ನೂ ಹೆಚ್ಚಿಸಬೇಕು. ವಿದ್ಯಾಭ್ಯಾಸ, ವೈದ್ಯಸಹಾಯ, ನಿರುದ್ಯೋಗ ಮತ್ತು ಅಕಾಲಮರಣ ಇವುಗಳ ಪರಿಹಾರಕ್ಕಾಗಿ ಹಣವನ್ನು ವ್ಯಯಮಾಡಬೇಕು.

ಈ ರೀತಿಯಾಗಿ ಸಮಾಜದ ಉನ್ನತಿಯನ್ನು ಯೋಚಿಸುವುದರಲ್ಲಿ ಸರ್ಕಾರಕ್ಕೆ ಇರುವಷ್ಟು ಧಾರಾಳಬುದ್ಧಿ ದೃಷ್ಟಿವೈಶಾಲ್ಯಗಳು ನಮಗೆ ವೈಯಕ್ತಿಕವಾಗಿ ಇರಲಾರದು. ಸರ್ಕಾರವು ಪ್ರಜೆಗಳ ಸೌಖ್ಯಕ್ಕಾಗಿ ಏರ್ಪಾಡುಗಳನ್ನು ಮಾಡುವಾಗ ಅವರ ಇಂದಿನ ಸೌಖ್ಯವನ್ನೂ ಎಣಿಸಬೇಕು, ಅವರ ಮುಂದಿನ ಸೌಖ್ಯವನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ಇಂದಿನ ಪ್ರಜೆಗಳ ಬಡತನದ ಮತ್ತು ರೋಗಗಳ ನಿವಾರಣೆಗೆ ಕೆಲಸಗಳನ್ನೂ, ಮುಂದೆ ಪ್ರಜೆಗಳು ಈ ಕಷ್ಟಗಳಿಗೆ ಗುರಿಯಾಗದಂತೆ ತಡೆಯುವ ರಕ್ಷಣ ಕಾರ್ಯಗಳನ್ನೂ ಕೈಕೊಳ್ಳಬೇಕು. ಆಲೋಚನಾ ಪರನಾದವನು ತನ್ನ ಸಂಪಾದನೆಯನ್ನೆಲ್ಲಾ ಸದ್ಯದ ಸುಖಕ್ಕಾಗಿಯೇ ವ್ಯಯ ಮಾಡದೆ ಸ್ವಲ್ಪ ಭಾಗವನ್ನಾದರೂ ಕೂಡಿಟ್ಟಿದ್ದು ತನಗೆ ಮುಂದೆ ಒದಗಬಹುದಾದ ಕಷ್ಟನಷ್ಟಗಳ ಪರಿಹಾರಕ್ಕಾಗಿ ಅಥವಾ ಮಕ್ಕಳು ಮರಿಗಳ ಪುರೋಭಿವೃದ್ಧಿಗಾಗಿ ಉಪಯೋಗಿಸುವನು. ಹಾಗೆಯೇ ಮುಂದಾಲೋಚನೆಯುಳ್ಳ ಸರ್ಕಾರವೂ ತನ್ನ ಆದಾಯವನ್ನೆಲ್ಲಾ ಪ್ರಜೆಗಳ ತಾತ್ಕಾಲಿಕ ಸೌಖ್ಯಕ್ಕಾಗಿಯೇ ಖರ್ಚುಮಾಡದೆ ಪ್ರಜೆಗಳ ಮುಂದಿನ ಸೌಖ್ಯಕ್ಕಾಗಿ ವೆಚ್ಚಮಾಡುವುದು. ವಿದ್ಯಾಭ್ಯಾಸ, ಕೈಗಾರಿಕೆಗಳ ಪ್ರೋತ್ಸಾಹ, ಕೆರೆಕಟ್ಟೆಗಳ ನಿರ್ಮಾಣ, ವ್ಯಾಪಾರದ ಸೌಕರ್ಯಗಳು—ಇವುಗಳಿಗಾಗಿ ಮಾಡುವ ಖರ್ಚನ್ನು ಪುರೋಭಿವೃದ್ಧಿಯ ಖರ್ಚೆನ್ನಬಹುದು.

ಸರ್ಕಾರವು ಯೋಚಿಸಬೇಕಾದುದು ವೈಯಕ್ತಿಕ ಸೌಖ್ಯವೇ ಅಲ್ಲ. ಸಮಾಜದ ಒಂದೊಂದು ಗುಂಪಿನವರ ಸೌಖ್ಯವನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ಕೆಲವು ಗುಂಪಿನವರು ಮುಂದುವರಿಯುತ್ತಾರೆ, ಇನ್ನು ಕೆಲವು ಗುಂಪಿನವರು ಹಿಂದುಳಿಯುತ್ತಾರೆ. ಒಂದು ಗುಂಪಿನವರು ಲಕ್ಷಾಧೀಶ್ವರರಾಗುತ್ತಾರೆ,

ಇನ್ನೊಂದು ಗುಂಪಿನವರು ಬಡವರೂ ಭಿಕಾರಿಗಳೂ ಆಗುತ್ತಾರೆ. ಪಾಶ್ಚಾತ್ಯದೇಶಗಳಲ್ಲಿ ಕೈಗಾರಿಕೆಯ ಕ್ರಾಂತಿಯ ಪರಿಣಾಮವಾಗಿ ಕೆಲವರು ಬಂಡವಾಳಗಾರರಾದರು, ಅನೇಕರು ಕೂಲಿಗಾರ ರಾದರು. ಬಂಡವಾಳಗಾರರಿಗೆ ವಿದ್ಯಾಭ್ಯಾಸ, ವೈದ್ಯಸಹಾಯ, ನಿವಾಸಸೌಕರ್ಯಗಳು ಹೆಚ್ಚಿ ಅವರು ಮುಂದುವರಿಯುತ್ತಲೇ ಹೋದರು. ಕೂಲಿಗಾರರಿಗೆ ಆ ಸೌಕರ್ಯಗಳಿಲ್ಲದೆ ದಿನ ದಿನಕ್ಕೂ ಕ್ಷೀಣದಶೆಗೆ ಇಳಿಯುತ್ತಾ ಬಂದರು. ಇವರಿಬ್ಬರ ಅಂತಸ್ತಿನ ಅಂತರವು ಅಜಗಜಾಂತರವಾಯಿತು. ವಿಷಮವಾದ ಈ ಸಾಮಾಜಿಕ ಪರಿಸ್ಥಿತಿಯನ್ನು ಪರಿಹರಿಸುವುದು ಸರ್ಕಾರದ ಒಂದು ಮುಖ್ಯ ಕರ್ತವ್ಯ. ಇದಕ್ಕಾಗಿಯೇ ಹಣವಂತರಮೇಲೆ ಹೆಚ್ಚಿನ ತೆರಿಗೆಗಳನ್ನು ಹಾಕಿ ವಸೂಲಾದ ಹಣವನ್ನು ಬಡವರ ಅಭಿವೃದ್ಧಿಗಾಗಿ ಸರ್ಕಾರವು ಖರ್ಚುಮಾಡುವುದು.

ಸಮಾಜದ ಕೋಮುಕೋಮುಗಳ ಕಷ್ಟನಿಷ್ಠುರಗಳನ್ನು ಪರಿಹರಿಸುವುದಲ್ಲದೆ, ದೇಶದ ಬೇರೆ ಬೇರೆ ಭಾಗಗಳಲ್ಲಿ ರುವ ಜನರ ದುರ್ದಶೆಗಳನ್ನು ಹೋಗಲಾಡಿಸಲು ಪ್ರಯತ್ನ ಪಡುವುದೂ ಸರ್ಕಾರದ ಇನ್ನೊಂದು ಮುಖ್ಯ ಕೆಲಸ. ಮೈಸೂರಿನ ಮೈದಾನ ಪ್ರದೇಶವಂತೆ ದೇಶದ ಒಂದು ಭಾಗವು ಬಹು ಸಂಪದ್ಯುಕ್ತವಾಗಿರಬಹುದು. ಇನ್ನೊಂದು ಭಾಗವು ಮಲೆನಾಡಿನಂತೆ ಅನೇಕ ರೋಗರುಜಿನಗಳಿಗೆ ಈಡಾಗಿ ಹೀನ ಸ್ಥಿತಿಯಲ್ಲಿರಬಹುದು. ಈ ಅಂತರವನ್ನು ಹೋಗಲಾಡಿಸುವು ದಕ್ಕಾಗಿ ಮೈಸೂರು ಸರ್ಕಾರವು ಸಂಪದ್ಯುಕ್ತವಾದ ಪ್ರದೇಶಗಳ ಜನಗಳ ಮೇಲೆ ತೆರಿಗೆ ಹಾಕಿ ಬಂದ ಹಣವನ್ನು ಹೀನಸ್ಥಿತಿಯ ಲ್ಲಿರುವ ಪ್ರಾಂತಗಳ ಮೇಲೆ ಖರ್ಚುಮಾಡುತ್ತಿರುವುದು. ಹೀಗೆಯೇ ಇಂಡಿಯಾ ದೇಶದ ಕೇಂದ್ರ ಸರ್ಕಾರವು ಸಂಪ

ದ್ಯಕ್ತವಾದ ಬೊಂಬಾಯಿ ಬಂಗಾಳ ಮುಂತಾದ ಪ್ರಾಂತಗ ಳಿಂದ ಹಣವನ್ನು ವಸೂಲ್ಮಾಡಿ ಬಡತನದಲ್ಲಿರುವ ಬಿಹಾರ, ಒರಿಸ್ಸ ಮತ್ತು ಸಿಂಧೂ ಪ್ರಾಂತಗಳಿಗಾಗಿ ಖರ್ಚುಮಾಡುವುದು.

ಈ ರೀತಿಯಾಗಿ ಸಮಾಜದ ಸ್ಥಿತಿಗತಿಗಳ ಅಂತರಗಳನ್ನು ಕಡಮೆ ಮಾಡಿ ದೇಶದ ಒಟ್ಟು ಸೌಖ್ಯವನ್ನು ಹೆಚ್ಚಿಸಲು ಅನುಸರಿಸುವ ವ್ಯವಹಾರ ತತ್ತ್ವವನ್ನು 'ಪರಿವರ್ತನ ತತ್ವ' (Theory of Transference) ಎಂದು ಕರೆಯ ಬಹುದು. ಇದರಿಂದ ಒಂದು ಪ್ರಜಾಸಂಗಡದ ಅಥವಾ ಒಂದು ದೇಶದ ಭಾಗದ ಸಂಪತ್ತನ್ನು ತೆರಿಗೆಯ ಮೂಲಕ ವಸೂಲುಮಾಡಿ ಮತ್ತೊಂದು ಸಂಗಡಕ್ಕೆ ಅಥವಾ ಭಾಗಕ್ಕೆ ವರ್ಗಾಯಿಸಲಾಗುತ್ತದೆ. ಇಂಥಾ ವರ್ಗವನ್ನು ಪ್ರತ್ಯಕ್ಷವಾಗಿ ಯಾಗಲಿ ಪರೋಕ್ಷವಾಗಿಯಾಗಲಿ ಮಾಡಬಹುದು. ಮುದು ಕರ ಮಾಸಾಶನ, ವಿದ್ಯಾರ್ಥಿಗಳ ವೇತನ ಮುಂತಾದ ರೂಪ ಗಳಲ್ಲಿ ಮಾಡುವ ವ್ಯಯವು ಪ್ರತ್ಯಕ್ಷವರ್ಗಕ್ಕೆ ಸೇರಿದುದು. ರಸ್ತೆಗಳು, ಆಸ್ಪತ್ರೆಗಳು ಮುಂತಾದ ಸೌಕರ್ಯಗಳಿಗಾಗಿ ಮಾಡುವ ಖರ್ಚು ಪರೋಕ್ಷವರ್ಗಕ್ಕೆ ಉದಾಹರಣೆ.

ಎಲ್ಲಾ ಕಾಲಗಳಲ್ಲೂ ಎಲ್ಲಾ ಸಂದರ್ಭಗಳಲ್ಲೂ ಈ ವರ್ಗಾ ವರ್ಗಿಯ ತತ್ವವು ಒಂದೇ ಸಮನಾಗಿ ಫಲಕಾರಿಯಾಗುತ್ತ ದೆಯೆ ? ಅಥವಾ ಅದರ ಬದಲು ಕೆಲವು ವಿಷಯಗಳಲ್ಲಿ ಪ್ರಜೆಗಳಿಗೇ ಅವರಿಷ್ಟದಂತೆ ಖರ್ಚುಮಾಡುವ ಸ್ವಾತಂತ್ರ್ಯ ಕೊಟ್ಟರೆ ಪ್ರಜಾ ಸೌಕರ್ಯವು ಹೆಚ್ಚುತ್ತದೆಯೇ ? ಈ ಪ್ರಶ್ನೆ ಗಳು ನಮ್ಮ ಮನಸ್ಸಿನಲ್ಲಿ ಹುಟ್ಟುವುದು ಸಹಜವಾಗಿದೆ. ಇವಕ್ಕೆ ನಿಷ್ಕೃಷ್ಟವಾಗಿ ಉತ್ತರವನ್ನು ಹೇಳುವುದಕ್ಕಾಗುವುದಿಲ್ಲ. ಪ್ರಜೆ ಗಳಿಗೆ ಈ ಸ್ವಾತಂತ್ರ್ಯವನ್ನು ಕೊಟ್ಟರೆ ಅದು ಕೆಲವು ವೇಳೆ

ಒಳ್ಳೆಯ ಪರಿಣಾಮಕಾರಿಯಾಗುವುದು. ಸರ್ಕಾರವೇ ಹೆಚ್ಚಾಗಿ ತೆರಿಗೆಯನ್ನೆತ್ತಿ ಖರ್ಚುಮಾಡುವುದರಿಂದ ಅನೇಕ ವೇಳೆ ಪ್ರಜಾ ಸೌಖ್ಯವು ಹೆಚ್ಚಾಗುವುದು. ಇವುಗಳೆಲ್ಲಾ ಆಯಾ ದೇಶದ ಸನ್ನಿವೇಶಗಳಿಗೂ ಅಲ್ಲಿನ ತೆರಿಗೆಗೂ ಖರ್ಚಿನ ಪದ್ಧತಿಗಳಿಗೂ ಅನುಗುಣವಾಗಿರುವುವು. ಒಂದು ದೇಶದ ತೆರಿಗೆ ಮತ್ತು ಖರ್ಚಿನ ಕ್ರಮಗಳನ್ನು ನೋಡಿ ನಾವೂ ಅದೇ ರೀತಿ ಮಾಡಿದರೆ, ನವಿಲನ್ನು ನೋಡಿ ಕೆಂಬೂತವು ಪುಕ್ಕವನ್ನು ತೆರೆದು ಕೊಂಡಂತೆ ಆಗುವುದು. ತೆರಿಗೆಯನ್ನು ಹಾಕುವಾಗಲಾಗಲಿ ಒಂದು ಕಡೆ ವಸೂಲಾದ ಹಣವನ್ನು ಇನ್ನೊಂದು ಕಡೆಗೆ ವರ್ಗಾಯಿಸುವಾಗಲಾಗಲಿ ನಾವು ಮುಖ್ಯವಾಗಿ ಯೋಚನೆ ಮಾಡಬೇಕಾದುದು ಒಂದೇ ಅಂಶ-ಇದರಿಂದ ಪ್ರಜೆಗಳ ಒಟ್ಟು ಸೌಖ್ಯ ಹೆಚ್ಚುವುದೇ ಅಥವಾ ಇಲ್ಲವೇ ಎಂಬುದು.

---

# ಅಧ್ಯಾಯ ೨

## ನಿಂಗಡಣೆ ಮತ್ತು ಬೆಳವಣಿಗೆ

ಸಾಮಾನ್ಯವಾಗಿ ಒಂದು ವಿಷಯ ನಮ್ಮೆಲ್ಲರ ಅನುಭವಕ್ಕೂ ಬಂದಿದೆ. ಖರ್ಚುಮಾಡಬೇಕಾದ ಬಾಬುಗಳು ಅನೇಕವಿದ್ದರೂ ಖರ್ಚುಮಾಡುವುದಕ್ಕೆ ಇರುವ ಹಣ ಮಾತ್ರ ಅಲ್ಪ. ಆದುದರಿಂದ ಹಾಸಿಗೆ ಇದ್ದಷ್ಟು ಕಾಲು ಚಾಚಬೇಕಾಗುವುದು. ನಮ್ಮ ವರಮಾನದ ಮಟ್ಟವು ಖರ್ಚಿನ ಮಿತಿಯನ್ನು ನಿರ್ಧ

ರಿಸುತ್ತದೆ. ಸಾರ್ವಜನಿಕವೆಚ್ಚಕ್ಕೆ ಇಷ್ಟು ಕಟ್ಟುನಿಟ್ಟಿಲ್ಲ. ಖರ್ಚು ಹೆಚ್ಚಿದಂತೆ ತೆರಿಗೆಯನ್ನು ಹೆಚ್ಚಿಸಬಹುದು, ಹೊಸ ತೆರಿಗೆಗಳನ್ನು ಹಾಕಬಹುದು. ಬೇಕಾದರೆ ಸಾಲವನ್ನು ಕೂಡ ಮಾಡಬಹುದು. ಆದುದರಿಂದ ಸರ್ಕಾರಕ್ಕೆ ತನ್ನ ಆದಾಯ ವನ್ನು ಬಹುಮಟ್ಟಿಗೆ ಹೆಚ್ಚಿಸುವ ಶಕ್ತಿಯಿದೆ; ಖಾಸಗಿ ಜನರಿಗೆ ಅಷ್ಟು ಚೈತನ್ಯವಿಲ್ಲ. ಆದರೆ ಸರ್ಕಾರವು ಆದಾಯವನ್ನು ಹೆಚ್ಚಿಸುವುದಕ್ಕೂ ಒಂದು ಪರಮಾವಧಿ ಇದ್ದೇ ಇದೆ. ತೆರಿಗೆಯ ಭಾರವನ್ನು ಹೊರುವುದಕ್ಕೆ ಪ್ರಜೆಗಳಿಗೆ ಶಕ್ತಿಯಿರಬೇಕು. ಶಕ್ತಿಮೀರಿ ತೆರಿಗೆಹಾಕಿದರೆ ವರಮಾನವೂ ಕಡಮೆಯಾಗು ವುದು, ದೇಶದ ಸಂಪತ್ತೂ ಕ್ಷಯಿಸುವುದು. ರಾಜಕೀಯ ಚಳವಳಿಗಳೂ ಕ್ರಾಂತಿಗಳೂ ಹುಟ್ಟಿಕೊಳ್ಳುವುವು.

ಸರ್ಕಾರದ ಖರ್ಚುಗಳು ನಾನಾಬಗೆಯಾಗಿವೆ. ಇವನ್ನು ಅರ್ಥಶಾಸ್ತ್ರಜ್ಞರು ಅನೇಕ ವಿಧವಾಗಿ ವಿಂಗಡಿಸುವರು: ಸಾಮಾನ್ಯ ಖರ್ಚುಗಳು, ವಿಶೇಷ ಖರ್ಚುಗಳು, ಲಾಭದಾಯಕ ಖರ್ಚುಗಳು, ಲಾಭವಿಲ್ಲದುವು, ವರ್ಗವಾದ ಖರ್ಚು, ಮತ್ತು ನೇರವಾಗಿ ಆದ ಖರ್ಚು, ಪ್ರಧಾನವಾದ ಖರ್ಚು ಮತ್ತು ಅಪ್ರಧಾನವಾದುದು.

ಸರ್ಕಾರಿನೌಕರರ ಸಂಬಳಗಳು, ರಸ್ತೆ, ಕಟ್ಟಡ, ಕೆರೆಕಟ್ಟೆಗಳ ರಿಪೇರಿಗಳು, ಇತರ ಸಾದಿಲ್ವಾರು ಮೊದಲಾದ ಸರ್ಕಾರದ ವೆಚ್ಚಗಳು ಪ್ರತಿವರ್ಷವೂ ಇರುತ್ತವೆ. ಸಾಧಾರಣವಾಗಿ ಈ ಖರ್ಚನ್ನು ವರ್ಷದ ಮೊದಲಿನಲ್ಲಿಯೇ ಅಂದಾಜುಮಾಡಿ ಅವುಗಳಿಗೆ ಬೇಕಾದಷ್ಟು ಹಣವನ್ನು ತೆಗೆದಿಡಬಹುದು. ಈ ವಿಧವಾದ ಖರ್ಚನ್ನು ಸಾಧಾರಣ ಖರ್ಚೆಂದು ಕರೆಯಬಹುದು.

ಇದನ್ನು ವರ್ಷವರ್ಷವೂ ಬರುವ ಆದಾಯದಿಂದ ತೆಗೆದಿಡು ತ್ತಾರೆ.

ಆದರೆ ಕೆಲವುವೇಳೆ ನಮ್ಮ ಸಂಸಾರಗಳಲ್ಲಿ ಮದುವೆ ಖಾಯಿಲೆಕಸಾಲೆಗಳು ಸಾವುನೋವುಗಳು ಪ್ರಾಪ್ತವಾದಾಗ ಅವುಗಳಿಗಾಗಿ ಮಾಡುವ ಖರ್ಚನ್ನು ನಾವು ಮೊದಲೇ ನಿರ್ಧ ರಿಸಲಾರದೆ ಹಣಕ್ಕಾಗಿ ಪರದಾಡುವಂತೆ ಸರ್ಕಾರವೂ ಕೂಡ ಕೆಲವು ವಿಶೇಷರೀತಿಯ ಖರ್ಚುಗಳು ಹುಟ್ಟಿಕೊಂಡಾಗ ಅವು ಗಳಿಗಾಗಿ ಹಣವನ್ನೊದಗಿಸುವ ತಾಪತ್ರಯಕ್ಕೆ ಈಡಾಗ ಬಹುದು. ಯುದ್ಧ ಕ್ಷಾಮ ಪ್ರವಾಹ ಸಾಂಕ್ರಾಮಿಕರೋಗ ಗಳು ಬರುವುದನ್ನು ಯಾರುತಾನೇ ಕಂಡಿರುವರು? ೧೯೧೮ ರಲ್ಲಿ ಇದ್ದಕ್ಕಿದ್ದಂತೆ ಬಂದ ಇನ್‌ಫ್ಲೂಯಂಜಾ ಜಾಡ್ಯವು ಒಂದೂ ವರೆ ಕೋಟಿ ಪ್ರಜೆಗಳನ್ನು ಆಹುತಿಯಾಗಿ ತೆಗೆದುಕೊಂಡಿತು. ಇಂತಹ ಈತಿಬಾಧೆಗಳು ಒದಗಿದರೆ ಸರ್ಕಾರಕ್ಕೆ ಬಹಳವಾಗಿ ಹಣ ಖರ್ಚಾಗುವುದು. ಖರ್ಚಿಗೆ ಎಷ್ಟು ಬೇಕಾಗುವುದು, ಎಷ್ಟು ದಿವಸಗಳವರೆಗೆ ಈ ತೊಂದರೆಗಳು ಪ್ರಜೆಗಳನ್ನು ಬಾಧಿಸುವುವು ಎಂಬುದನ್ನು ಯಾರುತಾನೆ ಹೇಳಲಾಗುವುದು? ಹಿಂದಿನ ಮಹಾಯುದ್ಧದಲ್ಲಿ ಇಂಗ್ಲೆಂಡು ದಿನ ಒಂದಕ್ಕೆ ಹತ್ತುಕೋಟಿ ರೂಪಾಯಿಗಳಿಗಿಂತ ಹೆಚ್ಚಾಗಿ ಖರ್ಚುಮಾಡಬೇಕಾಗಿ ಬಂದು ಯುದ್ಧಮುಗಿಯುವುದರೊಳಗಾಗಿ ಸುಮಾರು ೯,೦೦೦ ಕೋಟಿ ರೂಪಾಯಿಗಳಷ್ಟು ಸಾಲಮಾಡಬೇಕಾಯಿತು. ಇಷ್ಟು ಹೆಚ್ಚಾದ ಖರ್ಚುಗಳನ್ನು ಸಾಧಾರಣ ವರಮಾನದಿಂದ ತೀರಿಸುವುದು ಕಷ್ಟ; ಆದುದರಿಂದ ಈ ಅಸಾಧಾರಣ ಖರ್ಚುಗಳಿಗೆ ಸಾಲವನ್ನು ಮಾಡುತ್ತಾರೆ. ಇಂಥ ಖರ್ಚನ್ನು ವಿಶೇಷ ಖರ್ಚೆಂದು ಕರೆಯ ಬಹುದು.

ಸರ್ಕಾರದ ಖರ್ಚನ್ನು ಇನ್ನೊಂದು ವಿಧವಾಗಿ ವಿಭಾಗಿಸ ಬಹುದು. ಯುದ್ಧಮಾಡುವುದು ಪ್ರಾಣಸಂರಕ್ಷಣೆಗೆ ಆವಶ್ಯಕ ವಾದರೂ ಆದರಿಂದ ಪ್ರಜಾಸೌಖ್ಯವು ಹೆಚ್ಚುವುದಿಲ್ಲ. ಯುದ್ಧಕ್ಕೆ ಕೋಟ್ಯಂತರ ರೂಪಾಯಿಗಳನ್ನು ಖರ್ಚುಮಾಡುವುದಕ್ಕೆ ಬದ ಲಾಗಿ ಆ ಹಣವನ್ನು ಕೈಗಾರಿಕೆಗಾಗಿಯೋ ನೀರಾವರಿ ಕೆಲಸ ಗಳಿಗಾಗಿಯೋ ವಿದ್ಯಾಭ್ಯಾಸಕ್ಕಾಗಿಯೋ ಉಪಯೋಗಿಸಿದರೆ ಕಾಲಕ್ರಮದಲ್ಲಿ ಉತ್ತಮಫಲದಾಯಕವಾಗುವುದು. ನಮ್ಮ ಮೈಸೂರು ಸರ್ಕಾರದವರು ಸಾಬೂನು ಮತ್ತು ಗಂಧವೆಣ್ಣೆಯ ಕಾರ್ಖಾನೆಗಳಿಗಾಗಿ ಮಾಡಿರುವ ಖರ್ಚಿನಿಂದ ಬಂಡವಾಳದ ಮೇಲೆ ಬಡ್ಡಿ ಬರುವುದಲ್ಲದೆ ಬಹಳವಾಗಿ ಲಾಭವೂ ಬರುತ್ತಿದೆ. ಇದೇ ರೀತಿಯಲ್ಲಿ ದೊಡ್ಡ ಕೆರೆಕಟ್ಟೆಗಳನ್ನು ಕಟ್ಟಿಸಿದರೆ ಭೂಕಂದಾಯದ ರೂಪದಲ್ಲಿ ಸರ್ಕಾರಕ್ಕೆ ಆದಾಯ ಬರುತ್ತದೆ. ಈ ವಿಧವಾದ ಖರ್ಚನ್ನು ಲಾಭದಾಯಕವಾದ ಖರ್ಚೆಂದು ಕರೆಯಬಹುದು.

ಕೆಲವುವೇಳೆ ಸರ್ಕಾರದ ಖರ್ಚು ಲಾಭದಾಯಕವಾದರೂ ಆ ಲಾಭವು ನಮ್ಮ ಕಣ್ಣಿಗೆ ಕಾಣದಿರಬಹುದು. ಒಳ್ಳೆಯ ರಸ್ತೆಗಳನ್ನು ಮಾಡಿಸಿ ಸೇತುವೆಗಳನ್ನು ಕಟ್ಟಿಸಿದರೆ ಸರ್ಕಾರಕ್ಕೆ ಸಾಕ್ಷಾತ್ತಾಗಿ ಲಾಭ ಬರದಿರಬಹುದು. ಆದರೆ ಒಳ್ಳೆಯ ರಸ್ತೆ ಗಳಿರುವುದರಿಂದ ಜನಗಳು ಹೆಚ್ಚು ಮೋಟಾರುಗಳನ್ನೂ ಬಸ್ಸು ಗಳನ್ನೂ ಗಾಡಿಗಳನ್ನೂ ಉಪಯೋಗಿಸುತ್ತಾರೆ. ಇದರಿಂದ ಗಾಡಿಗಳ ತೆರಿಗೆ, ಪೆಟ್ರೋಲ್ ತೆರಿಗೆ, ಸುಂಕ,—ಈ ವಿಧವಾದ ಉತ್ಪತ್ತಿ ಬರುತ್ತದೆ. ಇದೂ ಅಲ್ಲದೆ ಇನ್ನೊಂದು ವಿಧವಾಗಿ ಕಣ್ಣಿಗೆ ಕಾಣದ ಲಾಭ ಬರುವುದು. ವಿದ್ಯಾಭ್ಯಾಸಕ್ಕಾಗಿ ಖರ್ಚುಮಾಡಿದರೆ ಪ್ರಜೆಗಳು ಬುದ್ಧಿವಂತರಾಗಿ ಅಭಿವೃದ್ಧಿಗೆ

ಬಂದು ದೇಶದ ಸಂಪತ್ತನ್ನು ಹೆಚ್ಚಿಸುವರು. ಇದರಿಂದ ಪ್ರಜೆಗಳಿಗೆ ತೆರಿಗೆಗಳ ಹೊರೆಯನ್ನು ಹೊರುವ ಶಕ್ತಿ ಹೆಚ್ಚಿ ಸರ್ಕಾರಕ್ಕೆ ಕಾಲಾನುಕಾಲದಲ್ಲಿ ಆದಾಯವು ಬರುವುದು. ಈ ಮೂರು ವಿಧವಾದ ಲಾಭದಾಯಕವಾದ ಖರ್ಚುಗಳನ್ನು ಹೆಚ್ಚಿಸಿ ಉಪಯೋಗವಿಲ್ಲದ ಖರ್ಚನ್ನು ಕೈಲಾದಮಟ್ಟಿಗೂ ಕಡಮೆಮಾಡುತ್ತಾ ಬರಬೇಕು.

ಸಂಪಾದಿಸುತ್ತಿರುವವರಿಂದ ತೆರಿಗೆಗಳನ್ನು ವಸೂಲುಮಾಡಿ ಅದನ್ನು ವಿದ್ಯಾರ್ಥಿ ವೇತನ ರೂಪವಾಗಿ, ಬಡವರಿಗೆ ಕೊಡುವ ಮಾಸಾಶನ ರೂಪವಾಗಿ ಸರ್ಕಾರವು ಮಾಡುವ ಖರ್ಚನ್ನು ವರ್ಗಾಯಿಸಿದ ಖರ್ಚೆಂದು ಕರೆಯಬಹುದು. ರಸ್ತೆಯನ್ನೋ ಕೆರೆಯನ್ನೋ ಕಟ್ಟುವಾಗ ಸರ್ಕಾರವು ಹಣವನ್ನು ಒಬ್ಬನಿಂದ ತೆಗೆದು ಇನ್ನೊಬ್ಬನಿಗೆ ವರ್ಗಾಯಿಸದೆ ತಾನೇ ಖುದ್ದಾಗಿ ಕೆಲಸಮಾಡಿಸಿ ಹಣವನ್ನು ಖರ್ಚುಮಾಡುತ್ತದೆ. ಇದನ್ನು ನೇರವಾಗಿ ಆದ ಖರ್ಚೆನ್ನಬಹುದು.

ಸರ್ಕಾರವು ತನ್ನ ಪ್ರಜೆಗಳಿಂದಲೇ ಸಾಲವನ್ನು ತೆಗೆದುಕೊಂಡು ಅಸಲು ಮತ್ತು ಬಡ್ಡಿಗಳನ್ನು ತೆರಿಗೆ ಹಾಕಿ ಬಂದ ಹಣದಿಂದ ತೀರಿಸುವುದು ಒಳ್ಳೆಯದು. ಇದರಿಂದ ಅಪಾಯವೂ ನಷ್ಟವೂ ಕಡಿಮೆ. ಆದರೆ ಪರದೇಶದಲ್ಲಿ ಸಾಲಮಾಡಿ ಅಸಲು ಬಡ್ಡಿಗಾಗಿ ನಮ್ಮ ದೇಶದಲ್ಲಿ ವಸೂಲಾಗಿ ಬಂದ ಹಣವನ್ನು ವ್ಯಯಮಾಡುವುದು ನಮ್ಮ ಸಮಾಜಕ್ಕೆ ನಷ್ಟಕರವಾದುದು. ಈ ವಿಧವಾದ ಖರ್ಚನ್ನು ವ್ಯರ್ಥವಾದ ಖರ್ಚೆನ್ನಬಹುದು.

ಮತ್ತೆ ಕೆಲವರು ಅರ್ಥಶಾಸ್ತ್ರಜ್ಞರು ಸರ್ಕಾರವು ಕೈಕೊಳ್ಳಬಹುದಾದ ಕೆಲಸಗಳನ್ನನುಸರಿಸಿ ಖರ್ಚನ್ನು ವಿಭಾಗಮಾಡು

ತ್ತಾರೆ. ರಕ್ಷಣೆ, ಒಳಶಿಸ್ತು, ರಾಜ್ಯಾಡಳಿತ, ಋಣವಿಮೋಚನೆ ಇವುಗಳಿಗಾಗಿ ಮಾಡಿದ ಖರ್ಚನ್ನು ಅತ್ಯಾವಶ್ಯಕವಾದ ಖರ್ಚೆಂದು ಹೇಳುತ್ತಾರೆ. ಇವನ್ನು ನಾವು ಆಹಾರ ಮತ್ತು ಬಟ್ಟೆಗಳಿಗಾಗಿಮಾಡುವ ಖರ್ಚಿಗೆ ಹೋಲಿಸಬಹುದು. ಇಂಥಾ ಖರ್ಚುಗಳನ್ನು ಮಾಡದೆ ಸಮಾಜವನ್ನು ನಡೆಸುವುದು ಕಷ್ಟ.

ವಿದ್ಯಾಭ್ಯಾಸ, ಆರೋಗ್ಯ, ಕೈಗಾರಿಕೆ ಮೊದಲಾದುವುಗಳಿಗಾಗಿ ಸರ್ಕಾರವು ಮಾಡುವ ಖರ್ಚನ್ನು ಅಪ್ರಧಾನವಾದ ಖರ್ಚೆಂದು ಹೇಳಬಹುದು. ಇವುಗಳನ್ನು ನಾವು ಹಬ್ಬಗಳಿಗಾಗಿಯೂ ವಿನೋದಗಳಿಗಾಗಿಯೂ ಮಾಡುವ ಖರ್ಚಿಗೆ ಹೋಲಿಸಬಹುದು. ಇವುಗಳನ್ನು ಮಾಡದಿದ್ದರೂ ನಾವು ಜೀವಿಸಬಹುದು. ಆದುದರಿಂದ ಇವು ಅಷ್ಟು ಆವಶ್ಯಕವಲ್ಲವೆಂದು ಕೆಲವರು ಹೇಳುತ್ತಾರೆ. ಆದರೆ ಈ ಅಭಿಪ್ರಾಯವು ಸಾಧುವಲ್ಲ.

ಸಾರ್ವಜನಿಕ ಖರ್ಚನ್ನು ಕೇಂದ್ರ ಸರ್ಕಾರದ ಖರ್ಚು, ಪ್ರಾಂತಸರ್ಕಾರದ ಖರ್ಚು ಮತ್ತು ಸ್ಥಳೀಯ ಸಂಸ್ಥೆಗಳ ಖರ್ಚು ಈರೀತಿಯಾಗಿ ವಿಭಾಗಿಸುವ ಇನ್ನೊಂದು ವಿಧವಾದ ವಿಂಗಡಣೆಯೂ ಇದೆ.

**ಬೆಳವಣಿಗೆ**—ಸರ್ಕಾರದ ವೆಚ್ಚವು ಎಲ್ಲ ಕಾಲಗಳಲ್ಲೂ ಒಂದೇ ರೀತಿಯಾಗಿರುವುದಿಲ್ಲ. ಕಾಲದಿಂದ ಕಾಲಕ್ಕೆ ಬದಲಾಯಿಸುವುದು. ೧೮೩೪ ನೆಯ ಇಸವಿಯಲ್ಲಿ ಮೈಸೂರು ಸರ್ಕಾರವು ೬೫ ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿತು. ೧೯೩೧ ನೆಯ ಇಸವಿಯಲ್ಲಾದರೋ ಸುಮಾರು ಐದುಕೋಟಿ ರೂಪಾಯಿ ವೆಚ್ಚಮಾಡಿತು. ಈ ರೀತಿಯಾಗಿ ನಮ್ಮ ದೇಶದಲ್ಲಿ ಮಾತ್ರವೇ ಅಲ್ಲದೆ ಪ್ರಪಂಚದ ಎಲ್ಲಾ ರಾಜ್ಯಗಳಲ್ಲಿಯೂ ಖರ್ಚು

ಬೆಳೆಯುತ್ತಿರುವುದು. ೧೮೦೦ ನೆಯ ಇಸವಿಯಲ್ಲಿ ಅಮೆರಿಕಾ ಖಂಡದ ಸಂಯುಕ್ತಸಂಸ್ಥಾನದ ಖರ್ಚು ಸುಮಾರು ಮೂರು ಕೋಟಿ ರೂಪಾಯಿಗಳಾಗಿದ್ದು, ಈ ಶತಮಾನದ ಪ್ರಾರಂಭದಲ್ಲಿ ನೂರೈವತ್ತೈದುಕೋಟಿ ರೂಪಾಯಿಗಳಾಗಿದ್ದು, ೧೯೩೦ ರಿಂದೀಚೆಗೆ ಸಾವಿರ ಕೋಟಿಗಳನ್ನು ಮೀರಿದೆ. ಅದೇ ರೀತಿ ಇಂಗ್ಲೆಂಡುದೇಶದಲ್ಲಿಯೂ ಸರ್ಕಾರದ ಖರ್ಚು ಕಳೆದ ನೂರು ವರ್ಷಗಳಲ್ಲಿ ೯೦ ಕೋಟಿಯಿಂದ ೧೨೦೦ ಕೋಟಿಗಳಿಗೆ ಏರಿದೆ.

ಹೀಗೆ ಖರ್ಚು ಬೆಳೆಯಲು ಕಾರಣವೇನು ಎಂಬುದನ್ನು ವಿಚಾರಿಸೋಣ. ಈ ಬೆಳವಣಿಗೆಯಲ್ಲಿ ಕೆಲವು ಭಾಗ ನೈಜವಾದುದಲ್ಲ. ಹಿಂದಿನ ಕಾಲದಲ್ಲಿ ಪ್ರಜೆಗಳು ತೆರಿಗೆಗಳನ್ನು ದ್ರವ್ಯ ಮತ್ತು ವಸ್ತುರೂಪವಾಗಿ ಅಲ್ಲದೆ ದುಡಿಮೆಯ ರೂಪದಲ್ಲಿಯೂ ಸಲ್ಲಿಸುತ್ತಿದ್ದರು. ತಂಜಾವೂರಿನ ಪ್ರಸಿದ್ಧವಾದ ದೇವಾಲಯವು ಈ ರೀತಿ ದೇಹಶ್ರಮದ ರೂಪದಲ್ಲಿ ಕೊಟ್ಟ ತೆರಿಗೆಗಳಿಂದ ಕಟ್ಟಿದುದೆಂದು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ಅನೇಕ ಕೆರೆ ಕಾಲುವೆಗಳು ಬಹುಶಃ ಹೀಗೆ ಕಟ್ಟಿದುವೇ. ಈಗಲೂ ಕೆಲವು ಕಡೆ ರಸ್ತೆ ರಿಪೇರಿ, ಕೆರೆ ಶೋಧನೆ ಮುಂತಾದ ಕೆಲಸಗಳೊದಗಿದಾಗ ಮನೆಗೊಂದಾಳಿನಂತೆ ಹೋಗಿ ಕೆಲಸಮಾಡುವುದೂ ಮತ್ತು ಆ ಕೆಲಸಗಳಿಗೆ ಬೇಕಾದ ಮರ, ಮುಂಡಿಗೆ ಆಯುಧಗಳು ಮುಂತಾದ ಉಪಕರಣಗಳನ್ನು ಒದಗಿಸುವ ಪದ್ಧತಿಯೂ ಇದೆ. ಹೀಗೆ ಜನರು ಮಾಡುವ ಸಹಾಯ ಮತ್ತು ಸೇವೆಗಳಿಂದ ಪ್ರಜಾಸೌಖ್ಯ ಹೆಚ್ಚಿದರೂ ಅವುಗಳನ್ನು ಸರ್ಕಾರದ ಆಯವ್ಯಯದಲ್ಲಿ ತೋರಿಸುವುದಕ್ಕಾಗುವುದಿಲ್ಲ. ಈ ವಿಧವಾದ ಸಹಾಯವು ಹಿಂದಿನ ಕಾಲದಲ್ಲಿ ಬಹಳವಾಗಿದ್ದಿತು. ಇತ್ತೀಚೆಗೆ ಸರ್ಕಾರವು

ದುಡಿಮೆಗೆ ಬದಲಾಗಿ ಜನಗಳಿಂದ ಧನರೂಪದಲ್ಲಿ ತೆರಿಗೆಗಳನ್ನು ವಸೂಲುಮಾಡಿ ಅದನ್ನು ಮೇಲೆ ಹೇಳಿದ ಕೆಲಸಗಳಿಗೆ—ಅಂದರೆ ಕಟ್ಟಡವನ್ನು ಕಟ್ಟುವುದು, ರಸ್ತೆರಿಪೇರಿ, ಕೆರೆಯ ಶೋಧನೆ ಮುಂತಾದುವುಗಳಿಗೆ ಉಪಯೋಗಿಸುತ್ತದೆ. ಈ ಆದಾಯ ವ್ಯಯಗಳನ್ನು ಸರ್ಕಾರದ ಲೆಕ್ಕಪತ್ರಗಳಲ್ಲಿ ತೋರಿಸುವುದರಿಂದ ಸರ್ಕಾರದ ವರಮಾನ ಖರ್ಚುಗಳೆರಡೂ ಹೆಚ್ಚಿದಂತೆ ತೋರುವುವು. ಆದರೆ ನಿಜವಾಗಿಯೂ ಪ್ರಜಾಸೌಖ್ಯದ ಕೆಲಸಗಳು ಮೊದಲಿಗಿಂತ ಹೆಚ್ಚಿದುವೆಂದು ಹೇಳುವುದು ಕಷ್ಟ. ಅದೂ ಅಲ್ಲದೆ ಹಿಂದಿನ ಕಾಲದಲ್ಲಿ ಹಣಕಾಸಿನ ಲೆಕ್ಕಾಚಾರ, ತೆರಿಗೆಯ ಕ್ರಮ—ಇವುಗಳು ಈಗಿನಹಾಗೆ ಬೆಳೆದಿರಲಿಲ್ಲವಾದುದರಿಂದ ಸರ್ಕಾರದ ವೆಚ್ಚ ಮತ್ತು ವರಮಾನಗಳ ಅನೇಕ ಭಾಗಗಳು ನಮಗೆ ಸರಿಯಾಗಿ ತಿಳಿಯುತ್ತಿರಲಿಲ್ಲ.

ಆದರೆ ಖರ್ಚು ಹೆಸರಿಗೆ ಮಾತ್ರವಲ್ಲದೆ ವಾಸ್ತವವಾಗಿಯೂ ಅನೇಕ ಬಾಬುಗಳಲ್ಲಿ ಬೆಳೆದಿರುವುದು. ನಮ್ಮ ಸಂಸಾರಗಳಲ್ಲಿ ಜನಗಳು ಹೆಚ್ಚುತ್ತಾ ಸಂಸಾರದ ಖರ್ಚು ಹೆಚ್ಚುವಂತೆ ದೇಶದಲ್ಲಿ ಪ್ರಜಾಸಂಖ್ಯೆಯು ಹೆಚ್ಚಿದಂತೆಲ್ಲಾ ಸರ್ಕಾರದ ಖರ್ಚೂ ಹೆಚ್ಚುವುದು ಸಹಜ. ೧೮೦೦ ರಲ್ಲಿ ಅಮೆರಿಕಾದೇಶದಲ್ಲಿ ೮೦ ಲಕ್ಷ ಪ್ರಜೆಗಳಿದ್ದರು. ಅವರಿಗೋಸ್ಕರ ಸುಮಾರು ಮೂರು ಕೋಟಿ ರೂಪಾಯಿಗಳು ಖರ್ಚಾಗುತ್ತಿದ್ದುವು. ೧೯೦೦ ರಲ್ಲಿ ಅದೇ ದೇಶದ ಜನಸಂಖ್ಯೆಯು ೧೧ ಕೋಟಿಯಾದಾಗ ಆ ಹಣವು ಒಂದು ಬಾಬಿಗೂ ಕೂಡ ಸಾಲದಾಯಿತು. ಜನಸಂಖ್ಯೆ ಹೆಚ್ಚುತ್ತಾ ಖರ್ಚು ಹೆಚ್ಚುವುದಲ್ಲದೆ ಕಾರಣಾಂತರಗಳಿಂದ ಸರ್ಕಾರದ ಜವಾಬ್ದಾರಿಗಳು ಹೆಚ್ಚಿದ ಹಾಗೆಲ್ಲಾ ಖರ್ಚು ಹೆಚ್ಚುವುದು. ೧೯ ನೆಯ ಶತಮಾನದಲ್ಲಿ ಕೈಗಾರಿಕೆಯ

ಕ್ರಾಂತಿಯ ಪರಿಣಾಮವಾಗಿ ಸಾವಿರಾರು ಜನರು ಮಾಡುವ ಕೆಲಸಗಳನ್ನು ಹತ್ತಾರುಜನರು ಒಂದು ಯಂತ್ರದ ಸಹಾಯದಿಂದ ಮಾಡುವ ಹಾಗಾಯಿತು. ಇದರಿಂದ ಸಮಾಜದಲ್ಲಿ ನಿರುದ್ಯೋಗ ಬಡತನ ಇತ್ಯಾದಿ ರೋಗರುಜಿನಗಳು ಹುಟ್ಟಿಕೊಂಡವು ಇವು ಗಳನ್ನು ಪರಿಹರಿಸುವುದು ಸರ್ಕಾರದ ಮುಖ್ಯ ಕೆಲಸವಾಯಿತು. ಅದೂ ಅಲ್ಲದೆ ಸರ್ಕಾರದ ಸೂತ್ರಗಳು ಜನರ ಕೈಸೇರಿ ಸರ್ಕಾ ರದ ದೃಷ್ಟಿಯೂ ಬದಲಾಯಿಸಿತು. ಸರ್ಕಾರದ ಕಾನೂನು ಬಡವರಿಗೆ ಅನುಕೂಲವಾಗಿ ವಿದ್ಯಾಭ್ಯಾಸಕ್ಕೂ ಆಸ್ಪತ್ರೆಗಳಿಗೂ ಬಡತನದ ನಿವಾರಣೆಗಳಿಗೂ ವಾರ್ಧಕ್ಯಮಾಸಾಶನಗಳಿಗೂ ಸರ್ಕಾರವು ಹೆಚ್ಚು ಖರ್ಚುಮಾಡಬೇಕಾಯಿತು. ಹೀಗೆ ಹಿಂದೆ ಖಾಸಗೀ ಜನರೂ ಕುಟುಂಬಗಳೂ ಕೋಮುಗಳೂ ಕೈಕೊ ಳ್ಳುತ್ತಿದ್ದ ಅನೇಕ ಕೆಲಸಗಳನ್ನು ಸರ್ಕಾರವೇ ಕೈಕೊಂಡಿತು.

ಇಷ್ಟೇ ಅಲ್ಲ. ಯುದ್ಧಗಳೂ ಖರ್ಚುಹೆಚ್ಚುವುದಕ್ಕೆ ಕಾರಣ ಭೂತಗಳಾದುವು. ಆಧುನಿಕ ಯುದ್ಧಗಳು ಹಿಂದೆ ನಾವು ಕೇಳಿರುವ ರಾಮಾಯಣ ಮಹಾಭಾರತ ಯುದ್ಧಗಳಂತಲ್ಲ. ದಿನದಿನಕ್ಕೂ ಯುದ್ಧೋಪಕರಣಗಳು ಬದಲಾಯಿಸುತ್ತಿರು ವುದರಿಂದ ಹೊಸ ಹೊಸ ಆಯುಧಗಳನ್ನು ಕೊಳ್ಳಲು ಸರ್ಕಾರವು ಹೆಚ್ಚು ಹೆಚ್ಚಾಗಿ ಖರ್ಚುಮಾಡಬೇಕಾಗಿ ಬಂದಿದೆ. ಇದೂ ಅಲ್ಲದೆ ಯುದ್ಧಗಳಿಗೆ ಶಿಪಾಯಿಗಳನ್ನು ತರಬೇತುಮಾಡು ವುದಕ್ಕೂ, ಯುದ್ಧದಿಂದುಂಟಾಗುವ ಸಾವು ನೋವು ಮತ್ತು ಕಷ್ಟನಷ್ಟಗಳ ನಿವಾರಣೆಗೂ, ಮಾಡಿದ ಸಾಲವನ್ನು ತೀರಿಸು ವುದಕ್ಕೂ ಖರ್ಚನ್ನು ಅಪರಿಮಿತವಾಗಿ ಹೆಚ್ಚಿಸಬೇಕಾಗಿದೆ. ಹೀಗೆ ನಾನಾ ಕಾರಣಗಳಿಂದ ಪ್ರಪಂಚದ ಎಲ್ಲಾ ಭಾಗಗಳ ಲ್ಲಿಯೂ ಸರ್ಕಾರದ ವೆಚ್ಚವು ಬೆಳೆಯುತ್ತಿದೆ.

**ಕಟ್ಟುಗಳು**—ಮೇಲೆ ಹೇಳಿದಂತೆ ಬೆಳೆಯುತ್ತಿರುವ ಖರ್ಚಿನ ಅನೇಕ ಬಾಬುಗಳನ್ನು ಕಡಮೆ ಮಾಡಲು ಸಾಧ್ಯವಿಲ್ಲದಿರಬಹುದು. ಆದರೆ ಮುಂದಾಲೋಚನೆಯಿಂದ ಕೂಡಿದ ವ್ಯವಸ್ಥೆಯಿಂದ, ನಿಷ್ಕರ್ಷೆಯಾದ ಕಟ್ಟುಕಾಯಿದೆಗಳಿಂದ ಸ್ವಲ್ಪ ಮಟ್ಟಿಗೆ ಉಳಿಸಬಹುದು. ಖರ್ಚನ್ನು ಮಿತಗೊಳಿಸುವುದಕ್ಕೆ ಎಲ್ಲಾ ಸರ್ಕಾರಗಳೂ ಕೆಲವು ಕಟ್ಟುಗಳನ್ನು ಏರ್ಪಡಿಸಿಕೊಂಡಿವೆ. ಇವುಗಳಲ್ಲಿ 'ಬಡ್ಜೆಟ್' ಎಂಬುದು ಒಂದು. ಪ್ರತಿ ವರ್ಷದಲ್ಲೂ ಬರಬಹುದಾದ ಆದಾಯವನ್ನೂ ಮಾಡಬಹುದಾದ ಖರ್ಚನ್ನೂ ಅಂದಾಜು ಮಾಡುವ ಪದ್ಧತಿಗೆ ಬಡ್ಜೆಟ್ ಎಂದು ಹೆಸರು. ಸಾಧಾರಣವಾಗಿ ಪ್ರತಿ ಸರ್ಕಾರವೂ ವರ್ಷಕ್ಕೊಮ್ಮೆ ಬಡ್ಜೆಟ್ಟನ್ನು ತಯಾರು ಮಾಡಿ ಅದರಲ್ಲಿ ಹಿಂದಿನ ಎರಡು ವರ್ಷಗಳ ಆಯವ್ಯಯಗಳನ್ನೂ ಮುಂದಿನ ವರ್ಷದ ಆದಾಯ ವೆಚ್ಚಗಳ ಅಂದಾಜನ್ನೂ ತಿಳಿಸುತ್ತದೆ. ಹಿಂದೆ ಆದ ಖರ್ಚನ್ನೂ ಮುಂದೆ ಮಾಡಬೇಕೆಂದಿರುವ ಖರ್ಚನ್ನೂ ಆಯವ್ಯಯಗಳನ್ನೂ ಹೋಲಿಸುವುದರಿಂದ ಸರ್ಕಾರಕ್ಕೂ ಪ್ರಜೆಗಳಿಗೂ ಖರ್ಚಿನ ರೀತಿಯು ತಿಳಿದು ಪ್ರಜಾಕ್ಷೇಮಕ್ಕೆ ಬೇಕಾದಂತೆ ಖರ್ಚನ್ನು ಏರ್ಪಡಿಸಲು ಅವಕಾಶವೂ ದೊರಕುವುದು. ಮೈಸೂರಿನಲ್ಲಿ ಆಯವ್ಯಯಗಳ ಅಂದಾಜಿನ ವಿಮರ್ಶೆಗಾಗಿಯೇ ಪ್ರಜಾಪ್ರತಿನಿಧಿ ಸಭೆ ನ್ಯಾಯವಿಧಾಯಕಸಭೆಗಳ ಒಂದೊಂದು ಅಧಿವೇಶನ ಏರ್ಪಟ್ಟಿರುತ್ತದೆ.

ಬಡ್ಜೆಟ್ ಅಲ್ಲದೆ ಲೆಕ್ಕಾಚಾರಪತ್ರಗಳನ್ನೂ ಖರ್ಚಿನ ದಾಖಲೆಗಳನ್ನೂ ಒಂದು ನಿರ್ದಿಷ್ಟವಾದ ಕ್ರಮದಲ್ಲಿ ಇಡಬೇಕೆಂಬ ನಿಬಂಧನೆಯು ಎರಡನೆಯ ಕಟ್ಟು. ಇವನ್ನು ಪರೀಕ್ಷಿಸುವುದಕ್ಕೆ ಆಡಿಟರುಗಳನ್ನು ನಿಯಮಿಸುತ್ತಾರೆ. ಈ ಕೆಲಸವನ್ನು ಮೈಸೂರು

ದೇಶದ ಕಂಟ್ರೋಲರ್ ಇಲಾಖೆಯವರು ಮಾಡುತ್ತಾರೆ. ಈ ಆಡಿಟರುಗಳನ್ನು ಮಿಕ್ಕ ಇಲಾಖೆಗಳ ಅಧೀನತೆಗೆ ಒಳಪಡಿಸದೆ ಬಹಳ ಸ್ವಾತಂತ್ರ್ಯದಲ್ಲಿ ಇಟ್ಟಿದ್ದಾರೆ. ಇವರು ಪ್ರತಿಯೊಂದು ಖರ್ಚಿನ ವಿವರನ್ನೂ ವಿಚಾರಿಸಿ ಅಕ್ರಮವಾಗಿ ಮಾಡಿದ ಖರ್ಚನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅದಕ್ಕೆ ಜವಾಬ್ದಾರರಾದ ವರು ತೆರುವಂತೆ ಮಾಡುತ್ತಾರೆ. ಈ ಬಿಕ್ಕಟ್ಟು ಹಣದ ಅಕ್ರಮ ವಾದ ಖರ್ಚನ್ನು ಬಹುಮಟ್ಟಿಗೆ ತಡೆಯುತ್ತದೆ.

ಸರ್ಕಾರದ ನೌಕರರು ತಮ್ಮ ಆಫೀಸುಗಳಿಗೆ ಬೇಕಾದ ಸಾಮಾನುಗಳನ್ನು ಗೊತ್ತಾದ ಸಂಸ್ಥೆ ಅಥವಾ ಸಂಸ್ಥೆಗಳಿಂದ ಕೊಳ್ಳಬೇಕೆಂಬ ನಿಬಂಧನೆಯು ಖರ್ಚು ಮಿಗಿಸುವ ಇನ್ನೊಂದು ಉಪಾಯ. ಸ್ಟೋರ್ಸ್ ಪರ್ಚೇಸ್ ಇಲಾಖೆಯನ್ನು ಏರ್ಪಡಿ ಸುವ ಉದ್ದೇಶ ಇದೇ. ಸ್ಟೋರ್ಸ್ ಪರ್ಚೇಸ್ ಇಲಾಖೆಯ ಮೂಲಕ ಸರ್ಕಾರದ ಸಾಮಾನುಗಳೆಲ್ಲವನ್ನೂ ಕೊಂಡುಕೊಳ್ಳ ಬೇಕೆಂಬ ನಿಯಮವಿರುವುದರಿಂದ ಸುಲಭ ಬೆಲೆಗೆ ಒಳ್ಳೆಯ ಸಾಮಾನುಗಳನ್ನು ಕೊಂಡು ಆಗಬಹುದಾದ ಅನೇಕ ಅನ್ಯಾಯಗಳನ್ನು ತಪ್ಪಿಸಬಹುದು. ಪರೀಕ್ಷಿಸಿ ಅರ್ಹರಾದ ಕೆಲಸಗಾರರನ್ನು ಮಾತ್ರ ತೆಗೆದುಕೊಳ್ಳುವುದಕ್ಕೆ 'ಪಬ್ಲಿಕ್ ಸರ್ವಿಸ್ ಕಮಿಷನ್' ಎಂಬ ಇಲಾಖೆ ಏರ್ಪಡಿಸಿರುವುದರಿಂದ ಅನರ್ಹರಾದ ನೌಕರರಿಂದುಂಟಾಗುವ ವ್ಯರ್ಥವಾದ ಖರ್ಚನ್ನು ತಪ್ಪಿಸಬಹುದು.

# ಅಧ್ಯಾಯ ೩

## ಖರ್ಚಿನ ಬಾಬುಗಳು ಮತ್ತು ಅವುಗಳ ನಿರ್ಧಾರ

ಮೈಸೂರು ಸರ್ಕಾರದವರು ಪ್ರತಿವರ್ಷವೂ ಸುಮಾರು ಐದು ಕೋಟಿ ರೂಪಾಯಿಗಳನ್ನೂ ಬ್ರಿಟಿಷ್ ಇಂಡಿಯಾದ ಕೇಂದ್ರ ಮತ್ತು ಪ್ರಾಂತ ಸರ್ಕಾರದವರು ಇನ್ನೂರು ಹತ್ತು ಕೋಟಿ ರೂಪಾಯಿಗಳನ್ನೂ ಖರ್ಚುಮಾಡುತ್ತಾರೆ. ಆದರೆ ಅಮೆರಿಕದ ಸಂಯುಕ್ತಸಂಸ್ಥಾನದ ಕೇಂದ್ರ ಸರ್ಕಾರವೊಂದೇ ವರ್ಷ ಒಂದಕ್ಕೆ ಒಂದು ಸಾವಿರ ಕೋಟಿ ರೂಪಾಯಿಗಳನ್ನೂ ಇಂಗ್ಲೆಂಡು ಸರ್ಕಾರವು ಸಾವಿರದ ಇನ್ನೂರು ಕೋಟಿ ರೂಪಾಯಿಗಳನ್ನೂ ಖರ್ಚುಮಾಡುತ್ತವೆ. ಈ ವೆಚ್ಚವನ್ನು ನೋಡಿ ದಾಗ ಈ ತಾರತಮ್ಯಗಳಿಗೆ ಕಾರಣಗಳೇನು ಎಂಬ ಪ್ರಶ್ನೆ ಹುಟ್ಟುವುದು ಸಹಜ.

ಇವಕ್ಕೆ ಅನೇಕ ಕಾರಣಗಳಿವೆ. ಮೊದಲನೆಯದು ದೇಶದ ಸಂಪತ್ತು. ಆದಾಯ ಹೆಚ್ಚಿದರೆ ಖರ್ಚು ಹೆಚ್ಚಾಗಿ ಮಾಡ ಬಹುದು, ಆದಾಯ ಕಡಮೆಯಾಗಿದ್ದರೆ ಖರ್ಚೂ ಕಡಮೆ ಎಂಬುದು ಅನುಭವಸಿದ್ಧವಾದ ವಿಷಯ. ಹಣವಂತರು ದೊಡ್ಡ ದೊಡ್ಡ ಬಂಗಲೆಗಳಲ್ಲಿ ವಾಸಮಾಡುವರು, ಮೋಟಾರು ಗಾಡಿಗಳಲ್ಲಿ ಸಂಚರಿಸುವರು, ಆಳು ಕಾಳುಗಳನ್ನಿಟ್ಟುಕೊಂಡು ಸುಖಪಡುವರು. ಆದರೆ ಬಡವರಿಗೆ ಎಷ್ಟೇ ಆಶೆಯಿದ್ದರೂ ಈ ಸೌಖ್ಯಗಳನ್ನು ಅನುಭವಿಸುವುದು ಅಸಾಧ್ಯ. ಪ್ರಜೆಗಳಿಗೆ ಉಚಿತ ವಾದ ವಿದ್ಯಾಭ್ಯಾಸ, ವೈದ್ಯ ಸಹಾಯ ಮೊದಲಾದ ಸೌಕರ್ಯ ಗಳನ್ನು ಪ್ರತಿಯೊಂದು ಸರ್ಕಾರವೂ ಏರ್ಪಡಿಸಬೇಕು. ಆದರೆ

ಈ ಅನುಕೂಲಗಳನ್ನು ಮಾಡಿಕೊಡಬೇಕಾದರೆ ಅದಕ್ಕೆ ತಕ್ಕಷ್ಟು ಹಣವಿರಬೇಕು. ಈ ಹಣವು ತೆರಿಗೆಯ ಮೂಲಕ ಬರಬೇಕು. ಪ್ರಜೆಗಳು ಧನಿಕರಾಗಿದ್ದರೆ ಸರ್ಕಾರವು ಅವರ ಮೇಲೆ ತೆರಿಗೆ ಹಾಕಿ ಹಣವನ್ನು ಕೂಡಿಸಬಹುದು. ಇಂಗ್ಲೆಂಡ್ ದೇಶದಲ್ಲಿ ಸರಾಸರಿ ಪ್ರತಿಯೊಬ್ಬನ ಆದಾಯವು ೯೦೦ ರೂಪಾಯಿಗಳಿಗಿಂತ ಹೆಚ್ಚಾಗಿರುವುದರಿಂದ ಆ ಸರ್ಕಾರವು ವರ್ಷಕ್ಕೆ ಸಾವಿರದ ಇನ್ನೂರು ಕೋಟಿ ರೂಪಾಯಿಗಳನ್ನು ವಸೂಲ್ಮಾಡಿ ಖರ್ಚುಮಾಡಲು ಸಾಧ್ಯವಾಗಿದೆ. ನಮ್ಮ ದೇಶ ದಲ್ಲಾದರೊ ಪ್ರತಿಯೊಬ್ಬನ ಸರಾಸರಿ ವರಮಾನವು ೮೦ ರೂಪಾಯಿಗಳಿಗಿಂತ ಕಡಮೆಯಾಗಿರುವುದರಿಂದ ಎಷ್ಟೇ ಪ್ರಯತ್ನಮಾಡಿದರೂ ಇಂಡಿಯಾ ಸರ್ಕಾರಕ್ಕೆ ಇಂಗ್ಲೆಂಡಿನಷ್ಟು ಖರ್ಚು ಮಾಡಲು ಅಸಾಧ್ಯ. ಆದುದರಿಂದ ಆಯಾ ದೇಶದ ಸಂಪತ್ತಿಗನುಸಾರವಾಗಿ ಆದಾಯವ್ಯಯಗಳಿರುವುವು.

ಅಲ್ಲದೆ ಸಂಸಾರವು ದೊಡ್ಡದಾಗುತ್ತಾ ಮನೆಖರ್ಚು ಹೆಚ್ಚುವಂತೆ ದೇಶದ ಜನಸಂಖ್ಯೆ ಹೆಚ್ಚಿದಂತೆಲ್ಲಾ ಸರ್ಕಾರದ ಖರ್ಚೂ ಹೆಚ್ಚುತ್ತದೆ. ಅಲ್ಲದೆ ಸಾಧಾರಣವಾಗಿ ವ್ಯವಸಾಯವೇ ಮುಖ್ಯವಾಗಿರುವ ದೇಶದಲ್ಲಿ ಜನರ ಆವಶ್ಯಕತೆಗಳೂ ಕಡಮೆ ಮತ್ತು ಅವುಗಳನ್ನು ಈಡೇರಿಸಿಕೊಳ್ಳಲು ಹೆಚ್ಚಾಗಿ ಸರ್ಕಾರದ ಸಹಾಯವನ್ನೂ ಅಪೇಕ್ಷಿಸುವುದಿಲ್ಲ. ಅವರು ವ್ಯಕ್ತಿಸ್ವಾತಂತ್ರ್ಯಾಭಿಲಾಷಿಗಳಾದುದರಿಂದ ತಮ್ಮ ಕಷ್ಟನಷ್ಟಗಳನ್ನು ತಾವೇ ಪರಿಹರಿಸಿಕೊಳ್ಳಲು ಯತ್ನಿಸುತ್ತಾರೆ. ವ್ಯವಸಾಯವೇ ಮುಖ್ಯಜೀವನೋಪಾಯವಾಗಿರುವ ದೇಶಗಳಲ್ಲಿ ಸರ್ಕಾರದ ವೆಚ್ಚವು ಕಡಮೆ. ಇದಲ್ಲದೆ ಕೈಗಾರಿಕೆಯೇ ಮುಖ್ಯವೃತ್ತಿಯಾಗಿರುವ ದೇಶಗಳಲ್ಲಿ ಐಶ್ವರ್ಯವೂ ಹೆಚ್ಚಾಗಿರುತ್ತದೆ,

ಸಮಾಜದ ರೋಗರುಜಿನಗಳೂ ಹೆಚ್ಚಾಗಿರುತ್ತವೆ. ಈ ರೋಗ ರುಜಿನಗಳನ್ನು ಪರಿಹಾರಮಾಡುವ ಭಾರವೂ ಕೂಡ ಸರ್ಕಾರದ ಮೇಲೆಯೇ ಬೀಳುತ್ತದೆ. ಇಂಗ್ಲೆಂಡು, ಅಮೆರಿಕದ ಸಂಯುಕ್ತ ಸಂಸ್ಥಾನಗಳು ಮುಂತಾದ ಕೈಗಾರಿಕೆಯ ದೇಶಗಳಲ್ಲಿ ನಿರು ದ್ಯೋಗಿಗಳಿಗೂ ಮುದುಕರಿಗೂ ಜೀವನಾಂಶವನ್ನು ಸರ್ಕಾರವು ಬಹಳವಾಗಿ ತೆರಬೇಕು. ಆದರೆ ವ್ಯವಸಾಯವೇ ಮುಖ್ಯವಾಗಿ ರುವ ಕೆನಡಾ, ಆಸ್ಟ್ರೇಲಿಯಾ ಮುಂತಾದ ದೇಶಗಳಲ್ಲಿ ಈ ವಿಧ ವಾದ ಮಾಸಾಶನಗಳು ಬಹಳ ಕಡಮೆ.

ಮೇಲೆ ಹೇಳಿದವುಗಳಲ್ಲದೆ ಎಲ್ಲಾ ದೇಶಗಳಲ್ಲೂ ಈತಿಬಾಧೆ ಗಳು ಒಂದೇಸಮನಾಗಿರುವುದಿಲ್ಲ. ಕ್ಷಾಮ, ಭೂಕಂಪ, ಪ್ರವಾಹ, ಸಾಂಕ್ರಾಮಿಕರೋಗಗಳು—ಇವೆಲ್ಲ ಕೆಲವು ದೇಶ ಗಳಲ್ಲಿ ಹೆಚ್ಚಾಗಿಯೂ ಮತ್ತೆ ಕೆಲವುಗಳಲ್ಲಿ ಕಡಮೆಯಾಗಿಯೂ ಇರುತ್ತವೆ. ಇಂಡಿಯಾ, ಚೈನಾ, ಜಪಾನ್ ಮುಂತಾದ ದೇಶಗಳಲ್ಲಿ ಈ ವಿಧವಾದ ವಿಪತ್ತುಗಳು ಪ್ರಾಯಶಃ ಪ್ರತಿ ವರ್ಷದಲ್ಲಿಯೂ ಇದ್ದೇ ಇರುತ್ತದೆ. ಇಂಗ್ಲೆಂಡ್, ಫ್ರಾನ್ಸ್, ಅಮೆರಿಕ ಮುಂತಾದ ದೇಶಗಳಲ್ಲಿ ಇಂಥಾ ಪೀಡೆಗಳು ಬಹಳ ಅಪರೂಪ. ಆದಕಾರಣ ಇವುಗಳನ್ನು ನಿವಾರಿಸಲು ಸರ್ಕಾರಕ್ಕೆ ಆಗಬೇಕಾದ ವೆಚ್ಚವು ಎಲ್ಲಾ ದೇಶಗಳಲ್ಲೂ ಒಂದೇ ಸಮ ನಾಗಿರುವುದಿಲ್ಲ. ಈ ತೊಂದರೆಗಳು ಹೆಚ್ಚಾಗಿರುವ ದೇಶಗಳಲ್ಲಿ ಸರ್ಕಾರದ ಖರ್ಚು ಹೆಚ್ಚಾಗಿಯೇ ಇರಬೇಕಾಗುತ್ತದೆ.

ಇಂಡಿಯಾ, ರಷ್ಯಾ ಮುಂತಾದ ಕೆಲವು ದೇಶಗಳಲ್ಲಿ ಯಾವ ವ್ಯಕ್ತಿಯೇ ಆಗಲಿ ಸಂಸಾರವೇ ಆಗಲಿ ತಾನೇ ತಾನಾಗಿ ಇರಬೇಕೆಂಬ ಭಾವನೆ ಇಲ್ಲ. ಇಡೀ ಹಳ್ಳಿಯೇ ಒಂದು

ದೊಡ್ಡ ಸಂಸಾರವೆಂಬ ಭಾವನೆಯಿದೆ. ಅಲ್ಲಿ ಆಗುವ ಒಳ್ಳೆಯದು ಕೆಟ್ಟದ್ದು ಇವುಗಳಲ್ಲಿ ಹಳ್ಳಿಯವರೆಲ್ಲಾ ಭಾಗಿಗಳು. ಹಳ್ಳಿಯವರೆಲ್ಲಾ ಒಗ್ಗಟ್ಟಾಗಿ ಸೇರಿ ಪರಸ್ಪರ ಸಹಾಯ ಮಾಡುವ ಪದ್ಧತಿ ಇರುವ ದೇಶಗಳಲ್ಲಿ ಪ್ರಜೆಗಳು ಯಾವ ಕೆಲಸವಾಗಬೇಕಾದರೂ ಅದು ಸಮಾಜದಿಂದ ಇಲ್ಲವೆ ಸರ್ಕಾರದಿಂದ ಆಗಬೇಕೆಂದು ನಿರೀಕ್ಷಿಸುತ್ತಾರೆ. ಅಂಥ ದೇಶಗಳಲ್ಲಿ ಸರ್ಕಾರದ ಕರ್ತವ್ಯವೂ ಖರ್ಚೂ ಹೆಚ್ಚುತ್ತವೆ.

**ಖರ್ಚಿನ ಬಾಬುಗಳು**–ಸಮಾಜದ ಶಾಂತಿಸೌಖ್ಯಗಳನ್ನು ಪಾಲಿಸುವುದಕ್ಕೆ ಸರ್ಕಾರವು ಮಾಡುವ ಖರ್ಚು ಅನೇಕವಾಗಿರುತ್ತದೆ. ಬಹಳ ಮುಖ್ಯವಾದುದು ಪ್ರಜೆಗಳ ಪ್ರಾಣಮಾನಗಳನ್ನೂ ಆಸ್ತಿಪಾಸ್ತಿಗಳನ್ನೂ ರಕ್ಷಿಸುವುದು. ಆಜನ್ಮ ಹಕ್ಕುಗಳನ್ನು ಅನುಭವಿಸಲು ಪ್ರಜೆಗಳಿಗೆ ಅಡಚಣೆ ಬಂದರೆ ಸಮಾಜದ ಸೌಖ್ಯದ ಮಾತೇಕೆ, ಸಮಾಜ ಉಳಿಯುವುದೇ ಕಷ್ಟವಾಗುವುದು. ಅಹಿಂಸೆಯೇನೋ ಶ್ರೇಷ್ಠವಾದದ್ದು. ನಮ್ಮ ಶತ್ರುಗಳನ್ನೂ ಪ್ರೀತಿಯಿಂದ ಕಾಣಬೇಕೆಂಬ ಧ್ಯೇಯವು ಅತ್ಯುತ್ಕೃಷ್ಟವಾದುದು. ಆದರೆ ಇಂದಿನ ಪ್ರಪಂಚದಲ್ಲಿ ಈ ಧ್ಯೇಯವನ್ನು ಅನುಸರಿಸಲು ಅಸಾಧ್ಯವಾಗಿದೆ. ಜರ್ಮನಿ, ಇಟಲಿ, ಜಪಾನ್ ಮುಂತಾದ ದೇಶಗಳು ಪರದೇಶಗಳ ಮೇಲೆ ಬಿದ್ದು ಅವುಗಳನ್ನು ಸ್ವಾಧೀನಪಡಿಸಿಕೊಳ್ಳುವುದರಲ್ಲಿವೆ. ಹೀಗಿರುವಲ್ಲಿ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಲು ಪ್ರತಿದೇಶವೂ ಪ್ರಯತ್ನಪಡಬೇಕಾಗಿದೆ. ಅದಕ್ಕಾಗಿ ಸೈನ್ಯ, ನಾವೆ, ವಿಮಾನ ಇತ್ಯಾದಿಗಳನ್ನು ತಕ್ಕರೀತಿಯಲ್ಲಿ ಏರ್ಪಡಿಸಿಕೊಳ್ಳಬೇಕು. ಇದು ಖರ್ಚಿಲ್ಲದೆ ನಡೆಯುವ ಹಾಗಿಲ್ಲ. ಈ ಖರ್ಚಿನಿಂದ ಆಗುವ ಸಮಾಜ

ಸೌಖ್ಯವು ವಸ್ತುತಃ ಕಾಣಬರುವುದಿಲ್ಲ. ಆದರೆ ಹಾಗೆ ಖರ್ಚು ಮಾಡದ ಪಕ್ಷದಲ್ಲಿ ಸಮಾಜ ಉಳಿಯುವುದೇ ಕಷ್ಟ. ಈ ಖರ್ಚು ಸರ್ವಸೌಖ್ಯಕ್ಕೂ ಆಡಿಗಲ್ಲಾದ ಸ್ವಾತಂತ್ರ್ಯವನ್ನು ಕಾಪಾಡುತ್ತದೆ.

ರಕ್ಷಣೆಗಾಗಿ ಆಗುವ ವೆಚ್ಚವು ಕೆಲವು ದೇಶಗಳಲ್ಲಿ ಈ ಕೆಳಗೆ ಕಂಡಂತೆ ಒಂದೊಂದು ವಿಧವಾಗಿರುತ್ತದೆ.

| | | | | |
|---|---|---|---|---|
| ೧೯೩೯ ರಲ್ಲಿ | ಇಂಡಿಯಾ | ೫೦ | ಕೋಟಿ | ರೂಪಾಯಿಗಳು |
| ,, | ಅಮೆರಿಕಾದ ಸಂಯುಕ್ತ ಸಂಸ್ಥಾನಗಳು | ೪೮೦ | ,, | ,, |
| ,, | ಇಂಗ್ಲೆಂಡು | ೧೭೫ | ,, | ,, |
| ,, | ಫ್ರಾನ್ಸ್ | ೯೯ | ,, | ,, |
| ,, | ಜಪಾನು | ೧೭೯ | ,, | ,, |
| ,, | ಕೆನಡ | ೧೧ | ,, | ,, |

ರಕ್ಷಣೆಯ ಖರ್ಚಿನಲ್ಲಿ ಹೀಗೆ ವ್ಯತ್ಯಾಸಗಳಿರುವುದಕ್ಕೆ ಅನೇಕ ಕಾರಣಗಳಿವೆ. ಅಕ್ಕಪಕ್ಕದ ದೇಶಗಳು ಎಷ್ಟು ಖರ್ಚು ಮಾಡುತ್ತವೆ, ಅವು ಶಾಂತಿಪರವಾದುವೇ ಅಥವಾ ಯುದ್ಧಾಕಾಂಕ್ಷಿಗಳೇ ಎಂಬುದು ಮುಖ್ಯವಾದುದು. ನೆರೆಯವರು ಶಾಂತಿಪರರಾದರೆ ನಮ್ಮ ಖರ್ಚು ಕಡಮೆ. ಇಲ್ಲವಾದರೆ ಖರ್ಚು ಹೆಚ್ಚಾಗಿಯೇ ಇರಬೇಕಾಗುತ್ತದೆ. ಕೆನಡಾ ದೇಶಕ್ಕೆ ಇರುವಷ್ಟು ಶಾಂತಿಯುತವಾದ ನೆರೆ ಇನ್ನಾವದೇಶಕ್ಕೂ ಇಲ್ಲ. ಆದುದರಿಂದ ಕೆನಡಾದೇಶವು ತನ್ನ ರಕ್ಷಣೆಗಾಗಿ ಮಾಡುವ ಖರ್ಚು ಅತ್ಯಲ್ಪವಾದುದು. ಫ್ರಾನ್ಸ್ ಮತ್ತು ಬೆಲ್ಜಿಯಂ ದೇಶಗಳಿಗೆ ಇರುವಂತೆ ಕಾಲು ಕೆರೆದುಕೊಂಡು ಯುದ್ಧಕ್ಕೆ

ನಿಂತಿರುವ ನೆರೆಹೊರೆಯವರು ಮತ್ತಾವ ದೇಶಕ್ಕೂ ಇಲ್ಲ. ಆದುದರಿಂದ ಆ ದೇಶಗಳು ಯಾವಾಗಲೂ ಸುಶಿಕ್ಷಿತವಾದ ಸುಸಜ್ಜಿತವಾದ ಸೈನ್ಯವನ್ನಿಟ್ಟುಕೊಂಡೇ ಇರಬೇಕು. ಆದುದರಿಂದ ಅವುಗಳ ರಕ್ಷಣೆಯ ಖರ್ಚು ವಿಪರೀತವಾಗಿದೆ.

ಅಲ್ಲದೆ ದೇಶದ ವಿಸ್ತೀರ್ಣ ಮತ್ತು ಜನಸಂಖ್ಯೆ ಹೆಚ್ಚಾಗಿದ್ದರೆ, ಸಾಧಾರಣವಾಗಿ ಸೈನ್ಯದ ಖರ್ಚು ಹೆಚ್ಚು. ಏಕೆಂದರೆ ರಕ್ಷಿಸಬೇಕಾದ ಪ್ರದೇಶ ದೊಡ್ಡದು. ರಾಜ್ಯವೆಲ್ಲಾ ಒಂದೇ ಪ್ರದೇಶದಲ್ಲಿರದೆ ಬ್ರಿಟಿಷ್ ಅಥವಾ ಡಚ್ ಸಾಮ್ರಾಜ್ಯಗಳಂತೆ ನಾಲ್ಕಾರುಕಡೆಗಳಲ್ಲಿದ್ದರೆ ರಕ್ಷಣೆಯ ಖರ್ಚೂ ಹೆಚ್ಚುವುದು. ಆದರೆ ಈಗಿನ ಕಾಲದಲ್ಲಿ ಯುದ್ಧ ಕ್ರಮವೂ ಯುದ್ಧೋಪಕರಣಗಳೂ ದಿನ ದಿನಕ್ಕೂ ಬದಲಾವಣೆಯಾಗುತ್ತಿವೆ. ಈಗ್ಗೆ ಇಪ್ಪತ್ತು ವರ್ಷಗಳ ಕೆಳಗೆ ಉಪಯೋಗದಲ್ಲಿದ್ದ ಯುದ್ಧೋಪಕರಣಗಳು ಈಗ ನಿಷ್ಪ್ರಯೋಜನವಾಗಿವೆ. ಆದುದರಿಂದ ಕಾಲಕ್ಕೆ ತಕ್ಕಂತೆ ಪ್ರತಿ ಸರ್ಕಾರವೂ ಹೊಸ ಹೊಸ ಯುದ್ಧೋಪಕರಣಗಳನ್ನು ತಯಾರು ಮಾಡಲು ಖರ್ಚುಮಾಡಬೇಕಾಗುತ್ತದೆ.

ನಾನಾ ದೇಶಗಳು ರಕ್ಷಣೆಗಾಗಿ ಮಾಡುವ ಖರ್ಚನ್ನು ಹೋಲಿಸಬೇಕಾದರೆ ಮೇಲೆ ಹೇಳಿದ ಎಲ್ಲಾ ಅಂಶಗಳನ್ನೂ ಗಮನದಲ್ಲಿಟ್ಟುಕೊಳ್ಳಬೇಕು.

**ಒಳಸಿಸ್ತು**—ಇದರಲ್ಲಿ ದೇಶದೊಳಗಿನ ಶಾಂತಿಯನ್ನು ಕಾಪಾಡಲು ತಗುಲುವ ಖರ್ಚು ಮುಖ್ಯವಾದುದು. ಪೋಲೀಸ್ ಸಿಬ್ಬಂದಿ, ಕೋರ್ಟುಗಳು, ಜೈಲುಗಳು ಮೊದಲಾದುವುಗಳಿಗಾಗಿ ಮಾಡುವ ಖರ್ಚು ಒಳಸಿಸ್ತಿಗೆ ಸಂಬಂಧಪಟ್ಟದ್ದು.

ನೀತಿಶಾಸ್ತ್ರ, ಮತಬೋಧನೆ ಮತ್ತು ಕಟ್ಟುಕಾಯಿದೆಗಳು ಇವುಗಳಿಂದಲೇ ದೇಶದ ಒಳಶಾಂತಿಯನ್ನು ಕಾಪಾಡಲು ಸಾಧ್ಯವೆಂದು ಹೇಳುವುದಕ್ಕಾಗುವುದಿಲ್ಲ. ಕಳ್ಳತನ, ದರೋಡೆ ಮೊದಲಾದುವು ಇಲ್ಲದಿರಬೇಕಾದರೆ ಶಿಕ್ಷೆಯ ಭಯವಿರಬೇಕು. ರಾಮರಾಜ್ಯದಲ್ಲಿ ಹೇಗಿತ್ತೋ ಏನೋ. ಕಲಿಯುಗದ ರಾಜ್ಯಗಳಲ್ಲಂತೂ ಪೋಲೀಸು ಪಡೆ, ಕೋರ್ಟುಗಳು, ಜೈಲುಗಳು ಇದ್ದೇ ಇರಬೇಕು. ಅವುಗಳಿಗಾಗಿ ಮಾಡುವ ಖರ್ಚು ವೆಚ್ಚಗಳೂ ಅನಿವಾರ್ಯವಾದುವೇ.

**ರಾಜ್ಯಾಡಳಿತದ ಖರ್ಚು**—ದೇಶದ ರಕ್ಷಣೆ ಮತ್ತು ಒಳಸಿಸ್ತಿನ ಖರ್ಚಿನಂತೆಯೇ ರಾಜ್ಯಾಡಳಿತದ ಖರ್ಚೂ ಅತ್ಯಾವಶ್ಯಕವಾದುದು. ಕಂದಾಯವನ್ನು ವಸೂಲು ಮಾಡುವುದು, ಸರ್ಕಾರದ ವೆಚ್ಚವನ್ನು ಸರಿಯಾಗಿ ನೋಡಿಕೊಳ್ಳುವುದು, ಕಟ್ಟಳೆಕಾಯಿದೆಗಳನ್ನು ಮಾಡುವುದು, ಇವೇ ಮೊದಲಾದ ಬಾಬುಗಳಲ್ಲಿ ಖರ್ಚಾಗುವುದು. ಅನೇಕ ರೀತಿಯಲ್ಲಿ ಸರ್ಕಾರದ ಸೂತ್ರವನ್ನು ವಹಿಸಿ ಕಾರ್ಯನಿರ್ವಾಹ ಮಾಡಲು ಒಂದು ಆಡಳಿತ ಕ್ರಮವಿದ್ದೇ ಇರಬೇಕು. ರೆವಿನ್ಯೂ, ಅಬ್ಕಾರಿ ಮೊದಲಾದ ಇಲಾಖೆಯ ನೌಕರರು ಪ್ರತಿಯೊಂದು ಜಿಲ್ಲೆಯಲ್ಲೂ ಇದ್ದೇ ತೀರಬೇಕು. ಇದಕ್ಕೆಲ್ಲಾ ಬಹಳ ವೆಚ್ಚ ತಗುಲುವುದು. ರಾಜ್ಯಾಡಳಿತದ ಖರ್ಚೇ ಆಗಲಿ, ಯಾವನೊಬ್ಬ ನೌಕರನ ಸಂಬಳವೇ ಆಗಲಿ ಇಷ್ಟೇ ಇರಬೇಕೆಂದು ನಿರ್ಧರಿಸುವುದು ಬಹಳ ಕಷ್ಟ. ಈಚೆಗೆ ನಮ್ಮ ದೇಶದಲ್ಲಿ ಯಾರಿಗೂ ತಿಂಗಳಿಗೆ ೫೦೦ ರೂಪಾಯಿಗಳಿಗಿಂತ ಹೆಚ್ಚಾಗಿ ಸಂಬಳ ಕೊಡುವುದು ಅನ್ಯಾಯವೆಂದೂ ಹೆಚ್ಚಾಗಿ ಸಂಬಳ ಕೊಡುತ್ತಾ ಇರುವುದ

ರಿಂದ ಸರ್ಕಾರದ ಖರ್ಚು ಮಿತಿಮೀರಿದೆ ಎಂದೂ ಭಾವನೆ ಬಂದಿದೆ. ಇದು ಎಷ್ಟರಮಟ್ಟಿಗೆ ಸಾಧುವಾದುದೆಂಬುದನ್ನು ನಿಷ್ಕರ್ಷೆಯಾಗಿ ಹೇಳಲು ಸಾಧ್ಯವಿಲ್ಲ.

ಆದರೂ ಇದನ್ನು ವಿಚಾರ ಮಾಡಲು ಕೆಲವು ತತ್ವಗಳನ್ನು ನಿರೂಪಿಸಬಹುದು. ಎಲ್ಲಕ್ಕಿಂತಲೂ ಮೊದಲು ಸರ್ಕಾರದ ಕೆಲಸವು ಸಮರ್ಪಕವಾಗಿ ನಡೆಯಬೇಕು. ಆಡಳಿತಕ್ರಮವು ಸಮರ್ಪಕವಾಗಿಲ್ಲದಿದ್ದರೆ ಸರ್ಕಾರದ ಉದ್ದೇಶಸಾಧನೆಯಾಗುವುದಿಲ್ಲ. ಮಾಡಿದ ಸ್ವಲ್ಪ ಖರ್ಚೂ ವ್ಯರ್ಥವಾಗಿ 'ಅಗ್ಗದ ಆಸೆಗೆ ಮುಗ್ಗಿದ ಜೋಳ' ಎಂಬಂತಾಗುವುದು. ಸರ್ಕಾರದ ಕೆಲಸ ಅಚ್ಚುಕಟ್ಟಾಗಿ ನಡೆಯಬೇಕೆಂಬ ಅಭಿಪ್ರಾಯವನ್ನು ದಕ್ಷತೆಯ ತತ್ವ (Principle of efficiency) ಎಂದು ಕರೆಯಬಹುದು. ಹೀಗೆ ಕೆಲಸ ನಿರಂತರವಾಗಿ ನಡೆಯಬೇಕಾದರೆ ನೌಕರರಿಗೆ ಯೋಗ್ಯವಾದ ಸಂಬಳವಿಲ್ಲದಿದ್ದರೆ ಆಗುವುದಿಲ್ಲ. ಕೇವಲ ಗೌರವಕ್ಕಾಗಿ ನಿಸ್ಪೃಹರಾಗಿ ಕೆಲಸಮಾಡುವವರು ಬಹಳ ಮಂದಿಯೂ ಇಲ್ಲ; ಬಹಳ ದಿನವೂ ಮಾಡುವುದಿಲ್ಲ. ಹಾಗೆ ಕಡಮೆ ಸಂಬಳಗಳಿಗಾಗಿ ಕೆಲಸಮಾಡಿದರೆ ಸರ್ಕಾರದ ಆಡಳಿತ ಕೆಡುವುದಲ್ಲವೆ ಲಂಚವೇ ಮೊದಲಾದ ಅನ್ಯಾಯಗಳು ಹುಟ್ಟಿಕೊಳ್ಳುತ್ತವೆ. ಖರ್ಚೂ ಕೂಡ ವ್ಯರ್ಥವಾಗುವ ಸಂಭವವೂ ಹೆಚ್ಚು. ಆದುದರಿಂದ ಕೆಲಸಕ್ಕೆ ತಕ್ಕಂತೆ ಸಂಬಳಗಳನ್ನು ಕೊಡಬೇಕು. ಈಗೇನೋ ದೇಶಾಭಿಮಾನದ ಹೊಸ ಹುರುಪಿನಲ್ಲಿ ಅಲ್ಪ ಸಂಬಳಕ್ಕೆ ಕೆಲಸಮಾಡುವವರು ಸಿಕ್ಕಬಹುದು. ಆದರೆ ಎಲ್ಲ ಕಾಲಕ್ಕೂ ಇಂಥವರು ಸಿಕ್ಕುವುದು ಕಷ್ಟ. ಸರ್ಕಾರದ ನೌಕರಿಯಲ್ಲಿ ಸಂಬಳ ಮಾತ್ರವಲ್ಲದೆ, ಖಾಯಂ ನೌಕರಿ, ಸಲೀಸಾಗಿ ಬರುವ ಸಂಬಳ, ಗೌರವ, ವಿರಾಮ ಮುಂತಾದ ಇತರ ಅನು

ಕೂಲಗಳಿರುವುದರಿಂದ ಸ್ವಲ್ಪ ಕಡಮೆ ಸಂಬಳ ಕೊಟ್ಟರೂ ಬುದ್ಧಿವಂತರಾದ ನೌಕರರು ಸಿಕ್ಕುತ್ತಾರೆ. ಆದರೆ ಆ ನೌಕರರು ಸ್ವತಂತ್ರವಾಗಿ ಸಂಪಾದಿಸಬಹುದಾದ ಆದಾಯಕ್ಕೂ ಸರ್ಕಾರದ ಸಂಬಳಕ್ಕೂ ಹೆಚ್ಚು ಅಂತರವಿರಬಾರದು. ಈ ತತ್ವವನ್ನು 'ಪರಿಹಾರದ ತತ್ವ' (Principle of compensation) ಎಂದು ಕರೆಯಬಹುದು.

ಮೇಲೆ ಹೇಳಿದ ಮೂರುವಿಧವಾದ ಖರ್ಚುಗಳು ಅಂದರೆ ರಕ್ಷಣೆ, ಒಳಸಿಸ್ತು, ರಾಜ್ಯಾಡಳಿತ—ಇವು ಅತ್ಯಾವಶ್ಯಕವಾದ ಖರ್ಚುಗಳೆಂದು ಕರೆಯಲ್ಪಟ್ಟಿವೆ. ಪ್ರತಿ ಸರ್ಕಾರವೂ ಸರ್ಕಾರವೆನಿಸಿಕೊಳ್ಳಬೇಕಾದರೆ ಮತ್ತು ಸಮಾಜವನ್ನುಳಿಸಬೇಕಾದರೆ ಈ ಖರ್ಚುಗಳನ್ನು ಮಾಡಲೇಬೇಕು. ಇವುಗಳಲ್ಲದೆ ಇನ್ನೂ ಅನೇಕ ವಿಧವಾದ ಖರ್ಚುಗಳಿವೆ. ಪ್ರಜೆಗಳ ವಿದ್ಯೆ, ಆರೋಗ್ಯ ಮುಂತಾದುವುಗಳಿಗೆ ಪ್ರತಿ ಸರ್ಕಾರವೂ ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡುತ್ತವೆ.

## ಸಮಾಜ ಸೇವೆಯ ಖರ್ಚು

ಕೋಟಿರೂಪಾಯಿಗಳಲ್ಲಿ

| ಸಮಾಜಸೇವೆಯ ಖರ್ಚಿನ ಬಾಬುಗಳು | ಇಂಗ್ಲೆಂಡ್ (೧೯೩೩) | ಫ್ರಾನ್ಸ್ (೧೯೩೭) | ಇಂಡಿಯಾ (೧೯೩೫-೩೬) | ರಷ್ಯ ೧೯೩೬ |
|---|---|---|---|---|
| ವಿದ್ಯಾಭ್ಯಾಸ | ೨೬೪ | ೩೬ | ೧೨.೫ | ೪೦೭.೪ |
| ಆರೋಗ್ಯ | ೧೫೫ | ೧೨ | ೫.೬ | ೨೧೧.೪ |
| ನಿರುದ್ಯೋಗ ನಿವಾರಣೆ | ೧೪೧ | — | — | — |
| ಬಡತನದ ಪರಿಹಾರ | ೧೧೨ | ೧೪ | — | ೯೬ |
| ಅನಾಥರಕ್ಷಣೆ | ೧೧೬ | — | — | — |

ಮೇಲ್ಕಂಡಂತೆ ವಿದ್ಯೆ, ಆರೋಗ್ಯ, ಸಹಕಾರ, ನಿರುದ್ಯೋಗ ನಿವಾರಣೆ, ಬಡತನದ ಪರಿಹಾರ, ಮುದುಕರಿಗೆ ಜೀವನಾಂಶ, ಇವುಗಳಿಗಾಗಿ ಮಾಡುವ ಖರ್ಚನ್ನು ಸಮಾಜ ಸೇವೆಯ ಖರ್ಚು (Social service expenditure) ಎಂದು ಕರೆಯುತ್ತಾರೆ. ಇಂತಹ ಸೇವೆಯಲ್ಲಿ ಸರ್ಕಾರವು ಎಷ್ಟು ವೆಚ್ಚಮಾಡಿದರೂ ಕಡಮೆಯೇ.

ಎಲ್ಲಾ ದೇಶಗಳಲ್ಲಿಯೂ ಈ ವಿಧವಾದ ಖರ್ಚು ಒಂದೇ ಸಮನಾಗಿರುವುದಿಲ್ಲ. ಇಂಗ್ಲೆಂಡ್, ಅಮೆರಿಕಾ, ಮೊದಲಾದ ಕೆಲವು ದೇಶಗಳಲ್ಲಿ ಜನರು ವಿದ್ಯಾವಂತರೂ ಸ್ವಾವಲಂಬಿ ಗಳೂ ಧನಿಕರೂ ಆಗಿರುವುದರಿಂದ ವಿಶ್ವವಿದ್ಯಾನಿಲಯಗಳಿಗೂ ಪಾಠಶಾಲೆಗಳಿಗೂ ಕೋಟ್ಯಂತರ ರೂಪಾಯಿಗಳನ್ನು ಕೊಟ್ಟಿರು ತ್ತಾರೆ. ಮತ್ತು ಆ ದೇಶಗಳಲ್ಲಿ ಜನರು ಐಶ್ವರ್ಯವಂತರಾಗಿರು ವುದರಿಂದಲೂ ಆರೋಗ್ಯವಂತರಾಗಿರುವುದರಿಂದಲೂ, ಅವರಿಗೆ ಬೇಕಾದ ಆಸ್ಪತ್ರೆಗಳನ್ನೂ ಪಾಠಶಾಲೆಗಳನ್ನೂ ಅವರೇ ಏರ್ಪಡಿಸಿಕೊಳ್ಳುವುದರಿಂದಲೂ ಆ ದೇಶದ ಸರ್ಕಾರಗಳು ವಿದ್ಯೆ, ಆರೋಗ್ಯ, ಮೊದಲಾದುವುಗಳಿಗೆ ಮಾಡಬೇಕಾದ ಖರ್ಚು ಕಡಮೆಯಾಗುವುದು. ಆದರೆ ನಿರುದ್ಯೋಗ, ಬಡತನ ಮತ್ತು ಮುಪ್ಪು ಇವುಗಳಿಗೆ ತಗುಲುವ ವೆಚ್ಚವು ಆ ದೇಶಗಳಲ್ಲಿ ಅಸಾಧ್ಯವಾಗಿದೆ. ಏಕೆಂದರೆ ನಮ್ಮ ದೇಶದಲ್ಲಿರುವಂತೆ ಅವಿಭಕ್ತ ಕುಟುಂಬದಿಂದುಂಟಾಗುವ ಸಹಾಯವಾಗಲಿ ಧರ್ಮಸಂಸ್ಥೆಗಳ ಸಹಾಯವಾಗಲಿ ಆ ದೇಶಗಳಲ್ಲಿ ಹೆಚ್ಚಾಗಿಲ್ಲ. ಅದೂ ಅಲ್ಲದೆ ನಮ್ಮಂತೆ ಅಲ್ಲಿಯ ಜನರು ಅಲ್ಪಾಯುಗಳಲ್ಲ. ಮುದುಕರು ವಿಶೇಷವಾಗಿರುವುದರಿಂದ ಅವರಿಗೆ ಮಾಸಾಶನ ಕೊಡಬೇಕಾ ಗುವುದು. ಅಲ್ಲದೆ ಮೇಲೆ ಹೇಳಿದ ಕಷ್ಟಗಳನ್ನು ನಿವಾರಿಸು

ವುದು ಸರ್ಕಾರದ ಒಂದು ಮುಖ್ಯಕರ್ತವ್ಯವೆಂದು ಆ ಜನರು ತಿಳಿದುಕೊಂಡಿರುವರು. ಈ ಕಾರಣಗಳಿಂದ ಆ ದೇಶಗಳಲ್ಲಿ ಈ ವಿಧವಾದ ಸಮಾಜಸೇವೆಯ ಖರ್ಚು ಬಹಳ ಹೆಚ್ಚಿದೆ. ನಮ್ಮ ದೇಶದಲ್ಲಾದರೋ ನಿರುದ್ಯೋಗವೂ ದಾರಿದ್ರ್ಯವೂ ಮಿತಿಮೀರಿದ್ದರೂ ಜನಗಳ ಮೌಢ್ಯ, ಸಮಾಜದ ಬಡತನ, ಅವಿಭಕ್ತಕುಟುಂಬದಿಂದುಂಟಾಗುವ ಸಹಾಯ ಮತ್ತು ಸರ್ಕಾರದ ಔದಾಸೀನ್ಯ ಇವುಗಳಿಂದ ಸಮಾಜಸೇವೆಯ ಖರ್ಚು ಬಹಳ ಕಡಮೆ.

ಈ ವಿಧವಾದ ಖರ್ಚಿಗೆ ನಮ್ಮ ದೇಶದಲ್ಲಿರುವಷ್ಟು ಆವಶ್ಯಕತೆ ಬಹಳ ದೇಶಗಳಲ್ಲಿಲ್ಲ. ಮುಂದರಿತು ವಿವೇಚನೆಯಿಂದ ಖರ್ಚು ಮಾಡಿದ ಪಕ್ಷದಲ್ಲಿ ಸಮಾಜಸೇವೆಯ ಖರ್ಚಿಗೆ ಮಿತಿಯೇ ಇಲ್ಲ; ಈ ಖರ್ಚಿನಿಂದ ಸಮಾಜಕ್ಕೂ ಸರ್ಕಾರಕ್ಕೂ ಪ್ರತಿಯೊಬ್ಬ ಪ್ರಜೆಗೂ ಉಂಟಾಗುವ ಸೌಖ್ಯ ಮತ್ತು ಉಪಯೋಗಗಳಿಗೆ ಕೊನೆಯೇ ಇಲ್ಲ. ಈ ಖರ್ಚುಗಳನ್ನು ಕೆಲವರು ಅಷ್ಟು ಮುಖ್ಯವಾದುದಲ್ಲವೆಂದು ಭಾವಿಸುತ್ತಾರೆ. ಈ ಅಭಿಪ್ರಾಯವು ಸೂಕ್ತವಲ್ಲವೆಂದು ತೋರುತ್ತದೆ. ಏಕೆಂದರೆ ಶತ್ರು ಭಯದಿಂದ ಮತ್ತು ಕಳ್ಳಕಾಕರ ಭೀತಿಯಿಂದ ಜನರನ್ನು ಪಾರುಮಾಡುವುದು ಪ್ರಜೆಗಳಿಗೂ ಸಮಾಜಕ್ಕೂ ಎಷ್ಟು ಮುಖ್ಯವೋ ಮೌಢ್ಯದಿಂದಲೂ ಸಮಾಜದ ರೋಗರುಜಿನಗಳಿಂದಲೂ ಪಾರುಮಾಡುವುದೂ ಅಷ್ಟೇ ಮುಖ್ಯವಾದುದು. ಆರೋಗ್ಯಭಾಗ್ಯಕ್ಕಿಂತಲೂ ಭಾಗ್ಯವಿಲ್ಲ. ಜ್ಞಾನಕ್ಕಿಂತಲೂ ಹೆಚ್ಚಿನ ಸಂಪತ್ತಿಲ್ಲ. ವಿದ್ಯೆ ಸಂಪತ್ತು ಮೊದಲಾದುವುಗಳು ಇರಬೇಕಾದರೆ ಶಾಂತಿಯೂ ಭದ್ರತೆಯೂ ಆವಶ್ಯಕ. ಪ್ರಜೆಗಳಲ್ಲಿ ಐಕಮತ್ಯವೂ ಸ್ವಾತಂತ್ರ್ಯಾಭಿಲಾಷೆಯೂ ಉಂಟಾಗಿ ಒಳದೇಶ

ದಲ್ಲಿ ಶಾಂತಿನೆಲಸಿ ಅವರು ನ್ಯಾಯನಿಯಮಗಳನ್ನು ಅನುಸರಿಸ ಬೇಕೆಂದರೆ ವಿದ್ಯೆ, ಆರೋಗ್ಯ ಮೊದಲಾದುವು ಆವಶ್ಯಕ. ಸಮಾಜರಕ್ಷಣೆ ಮತ್ತು ಸೇವೆಯ ಖರ್ಚುಗಳು ಸಮಾಜದ ಎರಡು ಕಣ್ಣುಗಳೆಂದು ಹೇಳಬಹುದು.

**ಆರ್ಥಿಕಾಭಿವೃದ್ಧಿ**—ಮೇಲೆ ಹೇಳಿದ ಖರ್ಚುಗಳಲ್ಲದೆ ಸರ್ಕಾರವು ಇನ್ನೊಂದು ವಿಧವಾದ ಖರ್ಚನ್ನು ಮಾಡುತ್ತದೆ. ಕಬ್ಬಿಣ, ಉಕ್ಕು, ಸಾಬೂನು, ಗಂಧದ ಎಣ್ಣೆ, ಮೊದಲಾದುವು ಗಳನ್ನು ತಯಾರುಮಾಡುವ ಕಾರ್ಖಾನೆಗಳಿಗೂ ರೈಲು ಬಸ್ಸು ಮೊದಲಾದುವುಗಳಿಗೂ ರಸ್ತೆ ಸೇತುವೆ ಕೆರೆಕಟ್ಟೆಗಳಿಗೂ ಅನೇಕ ಸರ್ಕಾರಗಳು ಕೋಟ್ಯಂತರ ರೂಪಾಯಿಗಳನ್ನು ಖರ್ಚುಮಾಡು ತ್ತವೆ. ಈ ವಿಧವಾದ ಖರ್ಚುಗಳನ್ನು 'ಆರ್ಥಿಕಾಭಿವೃದ್ಧಿ'ಯ ಖರ್ಚುಗಳೆಂದು ಕರೆಯಬಹುದು. ಇವು ಅನೇಕವೇಳೆ ಬಂಡವಾ ಳದ ಮೇಲಿನ ಬಡ್ಡಿಯನ್ನು ಮಾತ್ರವಲ್ಲದೆ ಬಹಳಮಟ್ಟಿಗೆ ಲಾಭ ವನ್ನೂ ತರುವುವು. ಇವುಗಳನ್ನು ಲಾಭಕರವಾದ ಖರ್ಚುಗ ಳೆಂದೂ ಕರೆಯಬಹುದು. ವ್ಯಕ್ತಿತ್ವವಾದವು ಪ್ರಬಲವಾಗಿರುವ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಸರ್ಕಾರಕ್ಕೆ ಈ ವಿಧವಾದ ಖರ್ಚು ಕಡಮೆ. ಸಮಾಜವಾದವು ಆಚರಣೆಯಲ್ಲಿರುವ ರಷ್ಯಾ ಮೊದಲಾದ ದೇಶಗಳಲ್ಲಿ ಈ ಖರ್ಚು ಅಪರಿಮಿತವಾಗಿರುವುದು.

ಎಲ್ಲಾ ವಿಧವಾದ ಕೈಗಾರಿಕೆ ವ್ಯಾಪಾರಗಳನ್ನೂ ಸರ್ಕಾರವೇ ವಹಿಸಿಕೊಂಡು ಪ್ರಜೆಗಳಿಗೆ ಇವುಗಳನ್ನು ನಡೆಸಲು ಅವಕಾಶವಿ ಲ್ಲದಂತೆ ಮಾಡುವುದು ಸರಿಯಲ್ಲ. ಆದರೆ ಕೆಲವು ಕೈಗಾರಿಕೆಗ ಳನ್ನು ಸರ್ಕಾರವೇ ವಹಿಸಿ ಅವುಗಳಮೇಲೆ ಖರ್ಚುಮಾಡುವುದು ಸೂಕ್ತ. ಇವುಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

೧. ಸಮಾಜದ ರಕ್ಷಣೆಗಾಗಿ ಬೇಕಾದವು—ಯುದ್ಧ ಸಾಮಗ್ರಿಗಳನ್ನು ತಯಾರಿಸುವ ಕಾರ್ಖಾನೆಗಳು. ೨. ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಯಿ ಮುಂತಾದ ಸಾರ್ವಜನಿಕ ಸೌಕರ್ಯಗಳಿಗಾಗಿ ಆಗುವ ಖರ್ಚು, ಇವುಗಳ ಸರಬರಾಯಿ ಸ್ವಲ್ಪ ಹೆಚ್ಚುಕಡಿಮೆಯಾದರೆ ವ್ಯಾಪಾರ ಮತ್ತು ಕೈಗಾರಿಕೆಗಳೇ ನಿಂತು ಹೋಗಬಹುದು. ಅಥವಾ ನೀರು ಬೆಳಕಿಲ್ಲದೆ ಜೀವಿಸುವುದೇ ಕಷ್ಟವಾಗ ಬಹುದು. ಇದನ್ನು ತಿಳಿದು ಇದರ ಮಾಲೀಕರು ದರಗಳನ್ನು ಅತಿಯಾಗಿ ಹೆಚ್ಚಿಸಿ ಲಾಭಸಂಪಾದನೆಗಾಗಿಯೇ ಪ್ರಯತ್ನಪಡಬಹುದು. ಆದ್ದರಿಂದ ಇವುಗಳು ಸರ್ಕಾರ, ಇಲ್ಲದಿದ್ದರೆ ಇತರ ಸಾರ್ವಜನಿಕ ಸಂಸ್ಥೆಗಳ ಆಡಳಿತದಲ್ಲಿರಬೇಕು. ಸಾಧಾರಣವಾಗಿ ಈ ಕೆಲಸಗಳಿಂದ ಸರ್ಕಾರಕ್ಕೆ ಸ್ವಲ್ಪಮಟ್ಟಿಗೆ ಲಾಭವೇ ಬರುತ್ತದೆ. ಒಂದುವೇಳೆ ಬರದಿದ್ದರೂ ಸರ್ಕಾರದ ವೆಚ್ಚದಿಂದ ಪ್ರಜೆಗಳ ಸೌಖ್ಯವು ಹೆಚ್ಚುತ್ತದೆ. ೩. ಸಾಬೂನು, ಗಂಧದೆಣ್ಣೆ, ರೇಷ್ಮೆ, ಈ ವಿಧವಾದ ಕೈಗಾರಿಕೆಗಳು. ಇವುಗಳ ಮುಖ್ಯವಾದ ಉದ್ದೇಶ ಸಮಾಜರಕ್ಷಣೆಯೂ ಅಲ್ಲ, ಸಮಾಜಸೇವೆಯೂ ಇಲ್ಲ, ಸಮಾಜಸಹಾಯವೂ ಅಲ್ಲ; ಲಾಭಸಂಪಾದನೆ. ಸರ್ಕಾರವು ಸಾಮಾನ್ಯಪ್ರಜೆಗಳಂತೆಯೇ ಕಾರ್ಖಾನೆಯನ್ನೇರ್ಪಡಿಸಿ ಸಾಮಾನುಗಳನ್ನು ತಯಾರುಮಾಡಿ ಮಾರಿ, ಲಾಭಸಂಪಾದನೆಗೆ ಪ್ರಯತ್ನಪಡುತ್ತದೆ. ತನಗೇ ಇರತಕ್ಕ ಅಧಿಕಾರಬಲದಿಂದ ಇತರ ವ್ಯಾಪಾರಿಗಳನ್ನು ನಿರ್ಬಲರನ್ನಾಗಿ ಮಾಡಿ ಪ್ರಜೆಗಳನ್ನು ತನ್ನ ಸಾಮಾನನ್ನೇ ಉಪಯೋಗಿಸುವಂತೆ ನಿರ್ಬಂಧಪಡಿಸದೆ ತಾನೂ ಸಾಮಾನ್ಯ ವ್ಯಾಪಾರಿಯಂತೆ ಕಾರ್ಖಾನೆಯನ್ನು ನಡೆಸಿದರೆ ಸರ್ಕಾರ ಮಾಡುವ ಖರ್ಚು ಯಾವ ವಿಧದಲ್ಲೂ ತಪ್ಪಾಗಲಾರದು. ಎಷ್ಟು ಖರ್ಚುಮಾಡ

ಬಹುದು ಎಂಬುದು ಕೈಗಾರಿಕೆ ವ್ಯಾಪಾರಗಳಲ್ಲಿರತಕ್ಕ ಪ್ರೈಪ್ರೋಟಿ ಯನ್ನೂ ಬರಬಹುದಾದ ಲಾಭವನ್ನೂ ಮತ್ತು ಸರ್ಕಾರದ ಆಯವ್ಯಯವನ್ನೂ ಅನುಸರಿಸುತ್ತದೆ.

---

# ಅಧ್ಯಾಯ ೪

## ಪರಿಣಾಮ

ತೆರಿಗೆಗಳನ್ನು ಕೊಡುವುದರಿಂದ ಪ್ರಜೆಗಳ ಸಂಪತ್ತು ಸ್ವಲ್ಪ ಮಟ್ಟಿಗೆ ಕಡಮೆಯಾಗುವುದು. ಸರ್ಕಾರದ ವೆಚ್ಚದಿಂದಲಾ ದರೋ ಪ್ರಜೆಗಳ ಸೌಕರ್ಯವು ಬಹಳಮಟ್ಟಿಗೆ ಹೆಚ್ಚುವುದು. ಸರ್ಕಾರವು ತೆರಿಗೆಯ ರೂಪದಲ್ಲಿ ಹಣವನ್ನು ತೆಗೆದುಕೊಂಡು ಅದೇ ದ್ರವ್ಯವನ್ನು ಪ್ರಜೆಗಳಿಗೆ ಸಾರ್ವಜನಿಕ ವೆಚ್ಚದ ರೂಪ ದಲ್ಲಿ ಹಿಂದಕ್ಕೆ ಕೊಡುವುದರಿಂದ ಸಮಾಜದ ಆರ್ಥಿಕ ಸ್ಥಿತಿಗತಿ ಗಳು ಬಹಳಮಟ್ಟಿಗೆ ಬದಲಾಯಿಸುತ್ತವೆ.

ಸೈನ್ಯ ಪೋಲೀಸ್ ಮೊದಲಾದುವುಗಳ ಮೇಲೆ ಖರ್ಚು ಮಾಡುವುದರಿಂದ ಸಮಾಜ ಸೌಖ್ಯದ ಅಭಿವೃದ್ಧಿಗೆ ಬೇಕಾದ ಅಡಿಗಲ್ಲನ್ನು ಇಟ್ಟಂತಾಗುತ್ತದೆ. ಇದರಿಂದ ವ್ಯಾಪಾರ ಕೈಗಾ ರಿಕೆ ಮೊದಲಾದುವುಗಳ ಬೆಳವಣಿಗೆಗೆ ಅವಕಾಶವಿರುತ್ತದೆ.

ಆದರೆ ಈಗಿನ ಜರ್ಮನಿ ಮೊದಲಾದ ಪಾಶ್ಚಾತ್ಯ ದೇಶಗಳಂತೆ ರಕ್ಷಣೆಗೋಸ್ಕರ ವಿಪರೀತವಾಗಿ ವೆಚ್ಚಮಾಡಿದರೆ ಪ್ರಯೋಜನಕ್ಕಿಂತ ನಷ್ಟವೇ ಹೆಚ್ಚು. ಅಂಥ ದೇಶಗಳ ಆರ್ಥಿಕ ದಶೆಯು ಕ್ಷೀಣವಾಗುವುದು. ಇದಕ್ಕೆ ಬದಲಾಗಿ ವಿದ್ಯಾಭ್ಯಾಸ ಆರೋಗ್ಯ ಮೊದಲಾದ ಸಮಾಜ ಸೇವೆಗಾಗಿ ಖರ್ಚು ಹೆಚ್ಚಿದ ಹಾಗೆಲ್ಲಾ ಆರ್ಥಿಕಾಭಿವೃದ್ಧಿಯು ಹೆಚ್ಚುತ್ತದೆ. ವಿದ್ಯಾವಂತರೂ ಆರೋಗ್ಯಶಾಲಿಗಳೂ ಆದ ಪ್ರಜೆಗಳು ಹೆಚ್ಚು ಕೆಲಸಮಾಡಲು ಶಕ್ತರಾಗಿ ಹೆಚ್ಚು ಹೆಚ್ಚಾಗಿ ಸಂಪಾದಿಸಿ ತಮ್ಮ ಮತ್ತು ದೇಶದ ಐಶ್ವರ್ಯವನ್ನೂ ಬಂಡವಾಳವನ್ನೂ ಹೆಚ್ಚಿಸುತ್ತಾರೆ. ಕೆರೆ, ಕಟ್ಟೆ, ರಸ್ತೆ, ರೈಲು ಮೊದಲಾದುವುಗಳಿಗಾಗಿ ಮಾಡುವ ಖರ್ಚುಗಳು ವ್ಯಾಪಾರಕ್ಕೆ ಅನುಕೂಲವನ್ನು ಕಲ್ಪಿಸಿ ಅದರ ಬೆಳವಣಿಗೆಗೆ ಕಾರಣವಾಗುತ್ತವೆ. ಸರ್ಕಾರವು ಕಾರ್ಖಾನೆಗಳನ್ನು ಸ್ಥಾಪಿಸುವುದರಿಂದ ಪ್ರಜೆಗಳಿಗೆ ಆ ವಿಧವಾದ ಕೈಗಾರಿಕೆಗಳನ್ನು ಕೈಕೊಳ್ಳುವುದಕ್ಕೆ ಧೈರ್ಯವನ್ನು ಕೊಟ್ಟಂತಾಗುವುದು. ಹೀಗೆ ಸರ್ಕಾರವೂ ಖಾಸಗೀ ಜನರೂ ಕೈಗಾರಿಕೆಗಳಲ್ಲಿ ಉದ್ಯುಕ್ತರಾಗಿ ಧನಿಕರಾಗುವುದರಿಂದ ವರಮಾನದ ತೆರಿಗೆ, ಮುಂತಾದ ರೀತಿಯಲ್ಲಿ ಬರುವ ಸರ್ಕಾರದ ಆದಾಯವು ಹೆಚ್ಚುತ್ತದೆ. ಕೆಲವು ವೇಳೆ ಸರ್ಕಾರವು ತಾನೇ ಕಾರ್ಖಾನೆಗಳನ್ನು ಸ್ಥಾಪಿಸುವುದಕ್ಕೆ ಬದಲಾಗಿ ಖಾಸಗೀ ಜನರಿಗೆ ಧನ ರೂಪವಾಗಿ ಉತ್ತೇಜನವನ್ನು ಕೊಡುತ್ತದೆ. ಹೀಗೆ ದ್ರವ್ಯ ಸಹಾಯ ಮಾಡದೆ ಇದ್ದ ಪಕ್ಷದಲ್ಲಿ ಕೆಲವು ಕೈಗಾರಿಕೆಗಳು ದೇಶದಲ್ಲಿ ತಲೆಯೆತ್ತುವುದಕ್ಕಾಗುವುದಿಲ್ಲ. ಈ ರೀತಿಯಲ್ಲಿ ನಾನಾವಿಧದಲ್ಲಿ ಸರ್ಕಾರವು ಮಾಡುವ ಖರ್ಚಿನಿಂದ ಸಮಾಜದಲ್ಲಿ ಸಂಪತ್ತೂ ಸೌಖ್ಯವೂ ಹೆಚ್ಚುವುವು.

ಆದರೆ ಈ ಖರ್ಚಿಗೆ ಬೇಕಾದ ಹಣವನ್ನು ಸರ್ಕಾರವು ಸಾಧಾರಣವಾಗಿ ಪ್ರಜೆಗಳಿಂದಲೇ ತೆರಿಗೆ ಅಥವಾ ಸಾಲಪ ರೂಪದಲ್ಲಿ ಕೂಡಿಸುತ್ತದೆ. ಹೀಗೆ ಮಾಡುವುದರಿಂದ ಪ್ರಜೆಗಳ ಬಂಡವಾಳವು ಕಡಮೆಯಾಗಿ ಅವರು ಸ್ಥಾಪಿಸಬೇಕೆಂದಿದ್ದ ಕೈಗಾರಿಕೆಗಳೂ ಬೆಳೆಯದೆ ಸರ್ಕಾರವು ಇಷ್ಟಪಡುವ ಕೈಗಾರಿಕೆ ಗಳು ಮಾತ್ರ ವೃದ್ಧಿಯಾಗಬಹುದು.

ಮೇಲೆ ಹೇಳಿದಂತೆ ಸರ್ಕಾರವು ಇಷ್ಟಪಡುವ ಕೈಗಾರಿಕೆಗ ಳಿಗೋಸ್ಕರ ಖರ್ಚುಮಾಡುವುದೂ ಅಲ್ಲದೆ ಸರ್ಕಾರವು ದೇಶದ ಒಂದು ಭಾಗದಿಂದ ತೆಗೆದುಕೊಂಡು ಅದನ್ನು ಮತ್ತೊಂದು ಕಡೆ ಖರ್ಚುಮಾಡಬಹುದು. ಉದಾಹರಣೆಗಾಗಿ-ಇಂಡಿಯಾ ದೇಶದಲ್ಲಿ ಬಿಹಾರ ಮತ್ತು ಸಿಂಥ್ ಪ್ರಾಂತಗಳಲ್ಲಿ ಬಡತನ ಹೆಚ್ಚಾಗಿರುವುದರಿಂದ ಅಲ್ಲಿನ ಸರ್ಕಾರದ ಆದಾಯವು ಸ್ವಲ್ಪ ವಾಗಿ ಸಮಾಜಸೇವೆ ಮತ್ತು ಆರ್ಥಿಕಾಭಿವೃದ್ಧಿಯ ಖರ್ಚು ಗಳೂ ಬಹಳ ಕಡಮೆಯಾಗಿವೆ. ಬಂಗಾಳ ಮತ್ತು ಬೊಂಬಾಯಿ ಪ್ರಾಂತಗಳಲ್ಲಿ ಸಂಪತ್ತು ಹೆಚ್ಚಿ ಸರ್ಕಾರಕ್ಕೆ ಆದಾಯವು ಹೆಚ್ಚಾಗಿರುವುದರಿಂದ ಸರ್ಕಾರದ ಖರ್ಚೂ ಹೆಚ್ಚಿ ಪ್ರಜಾ ಸೌಖ್ಯವೂ ಹೆಚ್ಚಿದೆ. ಈ ಪ್ರಾಂತ್ಯಗಳೆಲ್ಲಾ ಹಿಂದೂಸ್ಥಾನದ ಅವಯವಗಳಂತೆ ಇವೆ. ಮನುಷ್ಯನ ಅವಯವಗಳಲ್ಲಿ ಒಂದು ಬೆಳೆದು ಮತ್ತೊಂದು ಕ್ಷೀಣವಾಗಿದ್ದರೆ ಹೇಗೆ ಶರೀರ ಸೌಖ್ಯವು ಹೆಚ್ಚುವುದಿಲ್ಲವೋ ಹಾಗೆಯೇ ಸಿಂಥ್ ಪ್ರಾಂತದಲ್ಲಿ ಬಡತನ ಹೆಚ್ಚಾಗಿ ಬಂಗಾಳದಲ್ಲಿ ಸಂಪತ್ತು ಹೆಚ್ಚಿದರೆ ಹಿಂದೂಸ್ಥಾನದ ಸೌಖ್ಯವೂ ಹೆಚ್ಚುವುದಿಲ್ಲ. ಹಾಗೆ ಹೆಚ್ಚಬೇಕಾದರೆ ಐಶ್ವರ್ಯ ವುಳ್ಳ ಪ್ರಾಂತಗಳಿಂದ ಹಣವನ್ನು ವಸೂಲುಮಾಡಿ ಬಡಪ್ರಾಂತ ಗಳಿಗೆ ಕೊಡಬೇಕು. ಕೇಂದ್ರ ಸರ್ಕಾರವು ಈ ನೀತಿಯನ್ನು

ಅನುಸರಿಸುವುದರಿಂದ ಆರ್ಥಿಕಾಭಿವೃದ್ಧಿಯು ಎಲ್ಲಾ ಭಾಗಗ ಳಲ್ಲೂ ಒಂದೇ ಸಮನಾಗಿರುತ್ತದೆ. ಮುಂದಾಲೋಚನೆಯಿಂದ ಮಿತಿಮೀರದೆ ಹೀಗೆ ವೆಚ್ಚಮಾಡುವುದು ಅತ್ಯಾವಶ್ಯಕ.

ಸರ್ಕಾರದ ವೆಚ್ಚದಿಂದ ಇನ್ನೊಂದು ವಿಧವಾದ ಪರಿಣಾ ಮವೂ ಉಂಟು. ಈಗಿನ ಸಮಾಜದಲ್ಲಿನ ಒಂದು ದೊಡ್ಡ ದೋಷವೇನೆಂದರೆ ಸಮಾಜದ ಸಂಪತ್ತನ್ನು ಪ್ರಜೆಗಳೆಲ್ಲರೂ ಅನುಭವಿಸುತ್ತಿಲ್ಲ. ಕೆಲವರು ಬಹಳ ಭಾಗ್ಯವಂತರಾಗಿಯೂ ಅನೇಕರು ನಿರ್ಗತಿಕರಾಗಿಯೂ ಇರುವರು. ಧನಿಕರಿಗೆ ವಿದ್ಯಾ ವ್ಯಾಸಂಗಕ್ಕೂ ಆರೋಗ್ಯ ಸಂಪಾದನೆಗೂ ಸಂಪದಭಿವೃದ್ಧಿಗೂ ಬೇಕಾದ ಅನುಕೂಲವಿರುತ್ತದೆ. ಬಡವನಿಗೆ ಹಣವಿಲ್ಲದಿರುವುದ ರಿಂದ ಇವು ಒಂದೂ ಸಾಧ್ಯವಿಲ್ಲ. ಅದಕ್ಕಾಗಿ ಸರ್ಕಾರವು ಭಾಗ್ಯವಂತರಿಂದ ಹಣವನ್ನು ವಸೂಲುಮಾಡಿ ಅನೇಕ ರೀತಿಯಲ್ಲಿ ಬಡವನಿಗೆ ಕೊಡುವುದು. ಸರ್ಕಾರವು ಕೆಲವುವೇಳೆ ವಿದ್ಯಾರ್ಥಿವೇತನ, ಮುದಿತನದ ಮಾಸಾಶನ, ನಿರುದ್ಯೋಗ ನಿವಾರಣೆಯ ವೇತನ ಇವೇ ಮೊದಲಾದ ರೀತಿಯಲ್ಲಿ ದ್ರವ್ಯ ರೂಪವಾಗಿ ಸಹಾಯ ಮಾಡುತ್ತದೆ. ಮತ್ತೆ ಕೆಲವು ವೇಳೆ ಅನ್ನದಾನ, ವೈದ್ಯಸಹಾಯ, ಉದ್ಯಾನವನ, ಪುಸ್ತಕಭಂಡಾರ, ವಾಚನಾಲಯಗಳು, ಬಡವರಿಗೆ ವಾಸದ ವಸತಿಗಳು—ಈ ರೀತಿಯಲ್ಲಿ ಸಹಾಯಮಾಡುತ್ತದೆ. ಹೀಗೆ ಮಾಡುವುದರಿಂದ ಬಡಬಗ್ಗರು ಮುಂದಕ್ಕೆ ಬರುವುದಕ್ಕೆ ಅವಕಾಶಕೊಟ್ಟು ಸಮಾ ಜದಲ್ಲಿ ಬಡವರಿಗೂ ಭಾಗ್ಯವಂತರಿಗೂ ಇರುವ ವ್ಯತ್ಯಾಸಗ ಳನ್ನು ಕಡಮೆಮಾಡಿದಂತಾಗುತ್ತದೆ. ಹಾಗೆ ಮಾಡದ ಪಕ್ಷದಲ್ಲಿ ಪ್ರಜೆಗಳಲ್ಲಿ ವೈಷಮ್ಯವು ಹುಟ್ಟಿ ಅಶಾಂತಿಯೂ ಕ್ರಾಂತಿಯೂ ಹುಟ್ಟಬಹುದು.

ಸರ್ಕಾರದ ಖರ್ಚಿನಿಂದ ಮೇಲೆ ಹೇಳಿದಂತೆ ಪ್ರಜಾಸೌಖ್ಯವು ಹೆಚ್ಚಬೇಕಾದರೆ ಸರ್ಕಾರವು ಈ ಕಾರ್ಯಕ್ರಮುಗಳನ್ನು ಬಹಳ ದೂರಾಲೋಚನೆಯಿಂದ ಕೈಕೊಳ್ಳಬೇಕು. ಮುಂದಾಲೋಚನೆಯಿಲ್ಲದೆ, ಸರಿಯಾದ ವ್ಯವಸ್ಥೆ ಇಲ್ಲದೆ ಸಮಾಜವು ತನ್ನಷ್ಟಕ್ಕೆ ತಾನೇ ಬೆಳೆಯುವುದಕ್ಕೆ ಬಿಟ್ಟಿರುವುದೇ ಇಂದಿನ ಅನೇಕ ಸಮಾಜದ ರೋಗರುಜಿನಗಳಿಗೆ ಮುಖ್ಯಕಾರಣ. ಎಲ್ಲ ವಿಧದಲ್ಲೂ ಅನುಕೂಲವಾದ ಒಂದು ಮನೆಯನ್ನು ಕಟ್ಟಬೇಕಾದರೆ ಮೊದಲು ಒಂದು ನಕ್ಷೆಯನ್ನು ರಚಿಸಬೇಕಾದುದು ಹೇಗೆ ಆವಶ್ಯಕವೋ ಹಾಗೆಯೇ ಒಂದು ಸಮಾಜವನ್ನು ರಚಿಸುವುದಕ್ಕೆ ಮುಂಚೆ ಅರ್ಥ ಕಾಮ ಧರ್ಮ ಮೋಕ್ಷ ಈ ಚತುರ್ವಿಧಪುರುಷಾರ್ಥಗಳ ಸಿದ್ಧಿಗೆ ಯೋಗ್ಯವಾದ ರೀತಿಯಲ್ಲಿ ಸಮಾಜವನ್ನು ರಚಿಸುವ ಯೋಚನೆ ಮಾಡಬೇಕು. ಅಂದರೆ ಯಾವ ಕೈಗಾರಿಕೆಗಳನ್ನು ಎಲ್ಲಿ ಸ್ಥಾಪಿಸಬೇಕು, ಎಷ್ಟು ಕಾರ್ಖಾನೆಗಳನ್ನು ಸ್ಥಾಪಿಸಬೇಕು, ಕೈಗಾರಿಕೆ, ವ್ಯವಸಾಯ, ವ್ಯಾಪಾರ ಇವುಗಳ ಪರಸ್ಪರ ಪ್ರಮಾಣ ಪ್ರಾಮುಖ್ಯ ಎಷ್ಟಿರಬೇಕು, ಪ್ರಜೆಗಳಲ್ಲಿ ಎಷ್ಟು ಜನರು ಕೈಗಾರಿಕೆಯನ್ನೂ, ಮತ್ತೆಷ್ಟು ಜನರು ಕೃಷಿಯನ್ನೂ ಅವಲಂಬಿಸಬೇಕು—ಇಂಥ ವಿಷಯಗಳನ್ನು ವಿಮರ್ಶೆಮಾಡಿ ಕ್ರಮಬದ್ಧವಾಗಿ ಸಮಾಜವು ರಚನೆಯಾಗಬೇಕು. ಸಮಾಜವು ವಿಚಕ್ಷಣೆಯಿಂದ ಪುನರ್ರಚನೆಯಾಗಬೇಕೆ ಎಂಬ ಅಭಿಪ್ರಾಯವು ಎಲ್ಲೆಲ್ಲೂ ಪ್ರಬಲವಾಗುತ್ತಿದೆ. ಪುನರ್ರಚನೆಯ ಕೆಲಸವನ್ನು ಕೈಕೊಳ್ಳಬೇಕಾದರೆ ಸರ್ಕಾರವು ಬಹುವಾಗಿ ಹಣ ಖರ್ಚುಮಾಡಬೇಕಾಗುವುದು.

**ಖರ್ಚಿನ ಒರೆಗಲ್ಲು**—ಸರ್ಕಾರವು ಮಾಡಿದ ಖರ್ಚಿನ ಗುಣದೋಷಗಳನ್ನು ಪರೀಕ್ಷಿಸುವುದು ಹೇಗೆ? ಬೇರೆ ಬೇರೆ ಸರ್ಕಾರಗಳ ಖರ್ಚನ್ನು ಹೋಲಿಸುವುದು ಹೇಗೆ?—ಎಂಬ ಪ್ರಶ್ನೆಗಳು ಹುಟ್ಟುವುವು. ಮೊದಲು ಸಾಧಾರಣವಾಗಿ ಖರ್ಚಿನ ಮೊತ್ತವನ್ನು ಯೋಚಿಸುತ್ತೇವೆ. ಆದರೆ ನಿಜವಾಗಿಯೂ ಸಮಾಜ ಸೌಖ್ಯಕ್ಕಾಗಿ ಆಗುವ ಖರ್ಚಿನ ಮೊತ್ತವನ್ನು ತಿಳಿಯಬೇಕಾದರೆ ಸರ್ಕಾರದ ಖರ್ಚೊಂದನ್ನೇ ಎಣಿಸಿದರೆ ಸಾಲದು. ಕೇಂದ್ರಸರ್ಕಾರ ಮೊದಲುಗೊಂಡು ಗ್ರಾಮಪಂಚಾಯತಿಯವರೆಗೆ ಎಲ್ಲಾ ಸಾರ್ವಜನಿಕ ಸಂಸ್ಥೆಗಳೂ ಮಾಡುವ ಒಟ್ಟು ಖರ್ಚನ್ನು ಗಣನೆಗೆ ತೆಗೆದುಕೊಳ್ಳಬೇಕು. ಅಮೆರಿಕಾ, ಇಂಗ್ಲೆಂಡು ಮೊದಲಾದ ದೇಶಗಳಲ್ಲಿ ಪ್ರಾಂತ ಮತ್ತು ಸ್ಥಳೀಯ ಸಂಸ್ಥೆಗಳು ಪ್ರಜೆಗಳಿಗೋಸ್ಕರ ಬಹಳವಾಗಿ ಖರ್ಚುಮಾಡುತ್ತವೆ. ಇಂಡಿಯಾ ಮತ್ತು ಫ್ರಾನ್ಸ್‌ದೇಶಗಳಲ್ಲಿಯಾದರೋ ಸ್ಥಳೀಯ ಸಂಸ್ಥೆಗಳು ಬೆಳೆದಿಲ್ಲ; ಅವುಗಳು ಮಾಡುವ ಖರ್ಚೂ ಕಡಮೆ. ಆದುದರಿಂದ ಈ ದೇಶಗಳಲ್ಲಿ ಕೇಂದ್ರ ಮತ್ತು ಪ್ರಾಂತ ಸರ್ಕಾರಗಳೇ ಬಹಳ ಮಟ್ಟಿಗೆ ಖರ್ಚುಮಾಡುತ್ತವೆ. ಒಂದುವೇಳೆ ಎಲ್ಲಾ ಸಾರ್ವಜನಿಕ ಸಂಸ್ಥೆಗಳ ವೆಚ್ಚವನ್ನು ಗಣನೆಮಾಡಿದರೂ ಅದರಿಂದಲೇ ಎಷ್ಟರಮಟ್ಟಿಗೆ ಪ್ರಜಾಸೌಖ್ಯಕ್ಕಾಗಿ ಖರ್ಚು ಆಗಿದೆ. ಎಂದು ಹೇಳುವುದಕ್ಕಾಗುವುದಿಲ್ಲ; ದೇಶದ ವಿಸ್ತಾರ ಮತ್ತು ಜನಸಂಖ್ಯೆ ಇವುಗಳನ್ನು ಲೆಖ್ಖಕ್ಕೆ ತೆಗೆದುಕೊಳ್ಳಬೇಕು. ಉದಾಹರಣೆಗಾಗಿ ನಮ್ಮ ಸಂಸ್ಥಾನವು ಸುಮಾರು ಐದು ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತದೆ. ಇಂಡಿಯಾದೇಶದ ಕೇಂದ್ರ ಮತ್ತು ಪ್ರಾಂತ ಸರ್ಕಾರಗಳು ಸುಮಾರು ಇನ್ನೂರುಹತ್ತುಕೋಟಿ ರೂಪಾಯಿಗಳನ್ನು ಖರ್ಚು

ಮಾಡುತ್ತವೆ. ಇದರಿಂದ ನಮ್ಮ ಸಂಸ್ಥಾನವು ಪ್ರಜೆಗಳಿಗಾಗಿ ಮಾಡುವ ಖರ್ಚು ಕಡಮೆ ಎಂದು ಹೇಳುವುದು ಸರಿಯಲ್ಲ. ಪ್ರಜಾಸಂಖ್ಯೆಯನ್ನೂ ವಿಸ್ತೀರ್ಣವನ್ನೂ ಹೋಲಿಸಿದರೆ ತಲೆಯೊಂದಕ್ಕೆ ಮೈಸೂರು ದೇಶದವರು ಮಾಡುವ ಖರ್ಚು, ಇಂಡಿಯಾ ಸರ್ಕಾರವು ಮಾಡುವುದಕ್ಕಿಂತಲೂ ಅಧಿಕವಾಗಿದೆ.

ಆದುದರಿಂದ ನಿಜವಾದ ಒರೆಗಲ್ಲು ಒಟ್ಟು ವೆಚ್ಚವಲ್ಲ, ಒಬ್ಬೊಬ್ಬ ಪ್ರಜೆಗೆ ತಗಲುವ ಸರಾಸರಿ ಖರ್ಚೆಷ್ಟು ಎಂಬುದು. ಅಂದರೆ ಒಂದು ದೇಶದಲ್ಲಿ ಹತ್ತುಲಕ್ಷ ಪ್ರಜೆಗಳಿದ್ದು ಒಂದು ಕೋಟಿ ರೂಪಾಯಿಗಳನ್ನು ಸರ್ಕಾರವು ಖರ್ಚುಮಾಡಿದರೆ ತಲೆಗೆ ಹತ್ತುರೂಪಾಯಿ ಖರ್ಚು ಬೀಳುವುದು. ಈ ಖರ್ಚನ್ನು ಇನ್ನೂ ಒಳಹೊಕ್ಕು ನೋಡಬೇಕು. ಈ ಒಂದುಕೋಟಿ ರೂಪಾಯಿಗಳಲ್ಲಿ 90 ಲಕ್ಷ ರೂಪಾಯಿಗಳನ್ನು ಒಂದು ಲಕ್ಷ ಜನರ ಸೌಖ್ಯಕ್ಕಾಗಿ ಉಪಯೋಗಿಸಿ ಉಳಿದ ಹಣವನ್ನು ತೊಂಭತ್ತೊಂಭತ್ತು ಲಕ್ಷಜನರಿಗಾಗಿ ಖರ್ಚುಮಾಡಬಹುದು. ಹೀಗೆ ಮಾಡುವುದರಿಂದ ಸಮಾಜಸೌಖ್ಯವು ಹೆಚ್ಚುವುದಿಲ್ಲ. ಇದಕ್ಕೆ ಬದಲಾಗಿ ಎಲ್ಲಾ ಪ್ರಜೆಗಳ ಏಳಿಗೆಗಾಗಿಯೂ ಒಂದೇ ಸಮನಾಗಿ ಈ ಹಣವನ್ನೆಲ್ಲಾ ಖರ್ಚುಮಾಡಿದರೆ ಸಮಾಜ ಸೌಖ್ಯವು ಹೆಚ್ಚುವುದು. ಆದುದರಿಂದ ಎರಡು ದೇಶಗಳ ಖರ್ಚು ಒಟ್ಟು ಮೊತ್ತವೂ ಸರಾಸರಿ ತಲೆಯೊಂದಕ್ಕೆ ತಗಲುವ ಖರ್ಚು ಒಂದೇ ಆಗಿದ್ದರೂ ನಿಜವಾದ ಪರಿಸ್ಥಿತಿ ಬೇರೆಯಾಗಿರಬಹುದು.

ಮತ್ತೊಂದು ವಿಷಯವೇನೆಂದರೆ: ಒಂದು ಕೋಟಿ ರೂಪಾಯಿಗಳನ್ನು ಖರ್ಚುಮಾಡಿ ಒಂದು ಮಹಲನ್ನು ಕಟ್ಟಬಹುದು. ಅದೇ ಹಣವನ್ನು ಆಸ್ಪತ್ರೆ ಕೆರೆಕಟ್ಟೆ ಮೊದಲಾದುವುಗಳನ್ನು

ಕಟ್ಟಿಸುವುದಕ್ಕಾಗಿ ಉಪಯೋಗಿಸಿದರೆ ಸಮಾಜಕ್ಕೆ ಆಗುವ ಉಪಯೋಗ ಮಹಲಿನಿಂದಾಗುವುದಿಲ್ಲ. ಆದುದರಿಂದ ಖರ್ಚಿನ ಉದ್ದೇಶವೂ ಬಹಳ ಮುಖ್ಯವಾದುದು.

ಅಮೂ ಅಲ್ಲದೆ ಸರ್ಕಾರದ ಖರ್ಚಿನಿಂದ ಸೌಖ್ಯವುಂಟಾದರೂ ಅದು ಹಾಕುವ ತೆರಿಗೆಗಳು ಮಿತಿಮೀರಿದರೆ ಪ್ರಜೆಗಳಿಗೆ ಕಷ್ಟವೂ ಆಗಬಹುದೆಂಬ ಅಂಶವನ್ನು ಮರೆಯಬಾರದು. ಈ ಕಷ್ಟಸುಖ ಗಳೆರಡನ್ನೂ ತೂಕಮಾಡಿ ನೋಡಬೇಕು. ಬಡವರಿಂದಲೇ ಹಣವನ್ನು ವಸೂಲುಮಾಡಿ ಪುನಃ ಅವರಿಗೆ ಸರ್ಕಾರದ ಖರ್ಚಿನ ರೂಪದಲ್ಲಿ ಹಿಂದಕ್ಕೆ ಕೊಟ್ಟರೆ ಅವರಿಗಾದ ಉಪಕಾರ ಬಹಳ ಕಡಮೆ. ಅದಕ್ಕೆ ಬದಲಾಗಿ ಧನಿಕರಿಂದ ವಸೂಲುಮಾಡಿ ಆ ಹಣವನ್ನು ಬಡವರಿಗಾಗಿ ಖರ್ಚುಮಾಡಿದರೆ ಸಮಾಜಸೌಖ್ಯವು ಹೆಚ್ಚುತ್ತದೆ.

ಅಂದರೆ ಸರ್ಕಾರದ ಖರ್ಚಿನ ಉಪಯೋಗಗಳನ್ನು ಪರೀಕ್ಷಿಸಬೇಕಾದಲ್ಲಿ ಅದು ತಲೆಗೆಷ್ಟು ಖರ್ಚುಮಾಡುತ್ತದೆ, ಯಾವ ರೀತಿಯಲ್ಲಿ ಖರ್ಚು ಪ್ರಜೆಗಳಿಗೆಲ್ಲಾ ಹಂಚಿಕೆಯಾಗಿದೆ, ಯಾವ ಯಾವುದಕ್ಕೆ ವೆಚ್ಚವಾಗಿವೆ, ಮತ್ತು ಖರ್ಚಿಗೆ ಬೇಕಾದ ಹಣವು ಯಾರಿಂದ ಯಾವ ರೀತಿಯಲ್ಲಿ ವಸೂಲುಮಾಡಲ್ಪಟ್ಟಿವೆ—ಈ ನಾಲ್ಕು ಅಂಶಗಳನ್ನು ನೆನಪಿನಲ್ಲಿಡಬೇಕು.

---

# ಅಧ್ಯಾಯ ೫

## ಇಂಡಿಯಾದೇಶದ ವೆಚ್ಚ

ಪ್ರಪಂಚದಲ್ಲೆಲ್ಲಾ ಇಂಡಿಯಾ ದೇಶವು ಬಹಳ ಒಡತನದ ದೇಶ. ಈ ಬಡತನಕ್ಕೆ ಸರ್ಕಾರದ ಆಯವ್ಯಯಗಳ ರೀತಿಯೇ ಮುಖ್ಯ ಕಾರಣವೆಂಬುದಾಗಿ ಕೆಲವು ದೇಶಭಕ್ತರಾದ ಅರ್ಥ ಶಾಸ್ತ್ರಜ್ಞರು ಹೇಳುತ್ತಾರೆ. ಮತ್ತೆ ಕೆಲವರು ಈ ಅಭಿಪ್ರಾಯವನ್ನು ಒಪ್ಪದಿದ್ದರೂ ಇಂಡಿಯಾ ಸರ್ಕಾರದ ಆಯವ್ಯಯದ ರೀತಿಯಲ್ಲಿ ಅನೇಕ ತಪ್ಪುಗಳಿವೆ ಎಂದು ಧಾರಾಳವಾಗಿ ಒಪ್ಪುತ್ತಾರೆ. ಈ ವಾದಗಳು ಸರಿಯೇ ಎಂಬ ವಿಷಯವನ್ನು ಈಗ ವಿಚಾರಿಸೋಣ.

ಇಂಡಿಯಾದೇಶದಲ್ಲಿರುವ ಸುಮಾರು ಮೂವತ್ತೇಳು ಕೋಟಿ ಪ್ರಜೆಗಳಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ಸುಮಾರು ೨೨ ಕೋಟಿ ಜನರೂ ಉಳಿದ ೧೫ ಕೋಟಿ ಸಂಸ್ಥಾನಗಳಲ್ಲಿಯೂ ಇರುತ್ತಾರೆ. ಬ್ರಿಟಿಷ್ ಮತ್ತು ದೇಶೀಯ ಸರ್ಕಾರಗಳೆರಡೂ ಪ್ರಜೆಗಳಿಗಾಗಿ ಖರ್ಚುಮಾಡುತ್ತವೆ. ಆದರೆ ಎಲ್ಲ ಸಂಸ್ಥಾನಗಳ ಖರ್ಚಿನ ವಿವರವೂ ಸುಲಭವಾಗಿ ದೊರೆಯುವುದಿಲ್ಲವಾದುದರಿಂದ ಬ್ರಿಟಿಷ್ ಇಂಡಿಯಾ ಸರ್ಕಾರದ ವೆಚ್ಚವನ್ನು ಮಾತ್ರ ಇಲ್ಲಿ ವಿಮರ್ಶಿಸಬಹುದು. ಈ ಖರ್ಚು ಕೇಂದ್ರಸರ್ಕಾರ ಪ್ರಾಂತಿಕ ಸರ್ಕಾರ ಮತ್ತು ಸ್ಥಳೀಯ ಸರ್ಕಾರಗಳ ಖರ್ಚುಗಳನ್ನೊಳಕೊಂಡಿದೆ. ಸ್ಥಳೀಯ ಸರ್ಕಾರಗಳ ಖರ್ಚುಗಳನ್ನು ತಿಳಿಯಲು ಸ್ವಲ್ಪ ಕಷ್ಟವಾದುದರಿಂದ ಇಲ್ಲಿ ಕೇಂದ್ರ ಮತ್ತು ಪ್ರಾಂತದ ಸರ್ಕಾರಗಳ ಖರ್ಚನ್ನು ಮಾತ್ರ ಗಣನೆಗೆ ತೆಗೆದುಕೊಂಡಿದೆ.

ಕೇಂದ್ರಸರ್ಕಾರವು ವರ್ಷಕ್ಕೆ ಸರಾಸರಿ ೧೨೦ ಕೋಟಿ ರೂ. ಗಳನ್ನು ಈ ಕೆಳಗೆ ಕಂಡಂತೆ ಖರ್ಚುಮಾಡುತ್ತದೆ:

| ಖರ್ಚಿನ ಬಾಬುಗಳು | ೧೯೩೬-೩೭ |
|---|---|
| ೧. ರಕ್ಷಣೆ, ನ್ಯಾಯಸ್ಥಾಪನೆ ಇತ್ಯಾದಿ | ೫೩೭೨ ಲಕ್ಷ ರೂಪಾಯಿಗಳು |
| ೨. ರಾಜ್ಯಾಡಳಿತ | ೭೧೬ ,, |
| ೩. ಸಮಾಜಸೇವೆ | ೭೭ ,, |
| ೪. ಆರ್ಥಿಕಾಭಿವೃದ್ಧಿ | ೩೬೪೦ ,, |
| ೫. ಋಣವಿಮೋಚನೆ | ೧೨೫೫ ,, |
| ೬. ಇತರ ವಿಧ | ೭೧೩ ,, |

ಪ್ರಾಂತಿಕ ಸರ್ಕಾರಗಳು ಸುಮಾರು ೯೧ ಕೋಟಿ ರೂಪಾಯಿಗಳನ್ನು ಈ ಕೆಳಗೆ ಕಂಡಂತೆ ಖರ್ಚುಮಾಡುತ್ತವೆ:

| ಖರ್ಚಿನ ಬಾಬುಗಳು | ೧೯೩೬-೩೭ |
|---|---|
| ೧. ರಕ್ಷಣೆ, ಪೋಲೀಸ್, ನ್ಯಾಯಸ್ಥಾನ ಮೊದಲಾದುವು | ೧೯೬೫ ಲಕ್ಷ ರೂಪಾಯಿಗಳು |
| ೨. ರಾಜ್ಯಾಡಳಿತ- | ೧೯೪೬ ,, |
| ೩. ಸಮಾಜಸೇವೆ—ವಿದ್ಯಾಭ್ಯಾಸ, ಆರೋಗ್ಯ ಮೊದಲಾದುವು | ೧೭೨೭ ,, |
| ೪. ಆರ್ಥಿಕಾಭಿವೃದ್ಧಿ—ಕೈಗಾರಿಕೆ ಮೊದಲಾದುವು | ೨೦೬೧ ,, |
| ೫. ಋಣವಿಮೋಚನೆ | ೨೯೮ ,, |
| ೬. ಇತರ | ೧೧೨೩ ,, |

ಮೇಲೆ ಹೇಳಿದಂತೆ ರಕ್ಷಣಾಕೆಲಸವನ್ನು ಎರಡು ಸರ್ಕಾರದವರೂ ಕೈಕೊಳ್ಳುತ್ತಾರೆ. ಕೇಂದ್ರಸರ್ಕಾರವು ಹೊರ ಶತ್ರುಬಾಧೆ ಇಲ್ಲದಂತೆಯೂ ಪ್ರಾಂತಿಕ ಸರ್ಕಾರದವರು ದೇಶದ ಒಳಗಿನ ಶಾಂತಿ ಭಂಗವಾದಂತೆಯೂ ನೋಡಿಕೊಳ್ಳುತ್ತಾರೆ. ವಿದ್ಯಾಭ್ಯಾಸ ಆರೋಗ್ಯ ಮೊದಲಾದ ಸಮಾಜಸೇವೆಯ ಖರ್ಚನ್ನು ಬಹಳಮಟ್ಟಿಗೆ ಪ್ರಾಂತ ಸರ್ಕಾರವೇ ಮಾಡುತ್ತದೆ. ಆರ್ಥಿಕಾಭಿವೃದ್ಧಿಯ ಖರ್ಚಿನಲ್ಲಿ ಮುಖ್ಯವಾಗಿ ರೈಲುಗಳನ್ನು ಕೇಂದ್ರ ಸರ್ಕಾರದವರೂ ಉಳಿದ ಕೈಗಾರಿಕೆ ಮತ್ತು ವ್ಯವಸಾಯದ ಸೌಕರ್ಯಗಳನ್ನು ಪ್ರಾಂತಿಕ ಸರ್ಕಾರದವರೂ ಏರ್ಪಡಿಸುತ್ತಾರೆ.

## ಒಟ್ಟು ವೆಚ್ಚದಲ್ಲಿ ರಕ್ಷಣೆಗಾಗಿ ಮಾಡುವ ವೆಚ್ಚದ ಪ್ರಮಾಣ

| | | |
|---|---|---|
| ಇಂಡಿಯಾ | .... .... | ೪೩% |
| ಅಮೇರಿಕಾದ ಸಂಯುಕ್ತಸಂಸ್ಥಾನಗಳು | .... | ೨೦% |
| ಇಂಗ್ಲೆಂಡ್ | .... .... | ೨೫% |
| ಫ್ರಾನ್ಸ್ | .... .... | ೨೦% |
| ಜಪಾನ್ | .... .... | ೪೨% |

ಕೇಂದ್ರ ಸರ್ಕಾರವು ರಕ್ಷಣೆಗಾಗಿ ಬಹಳವಾಗಿ ಖರ್ಚು ಮಾಡುತ್ತದೆ. ಸರ್ಕಾರದ ಆದಾಯ ಮತ್ತು ದೇಶದ ಸಂಪತ್ತು ಇವುಗಳೊಂದಿಗೆ ರಕ್ಷಣೆಯ ಖರ್ಚನ್ನು ಹೋಲಿಸಿದರೆ ಇನ್ನಾವ ದೇಶವೂ ನಮ್ಮ ದೇಶದಷ್ಟು ಹೆಚ್ಚಾಗಿ ಖರ್ಚುಮಾಡುವುದಿಲ್ಲ. ಇಂಡಿಯಾ ಸರ್ಕಾರವು ರಕ್ಷಣೆಗಾಗಿ ಮಾಡುತ್ತಿರುವ ಮಿತಿ ಮೀರಿದ ಈ ಖರ್ಚನ್ನು ಅನೇಕ ದೇಶಭಕ್ತರು ತೀವ್ರವಾಗಿ ಖಂಡಿಸಿರುತ್ತಾರೆ. ಈ ಖಂಡನೆಯು ಅಷ್ಟು ಸರಿಯಲ್ಲ. ನಿಜ

ವಾಗಿಯೂ ರಕ್ಷಣೆಯ ಮೇಲೆ ನಾವು ಮಾಡಬೇಕಾದ ಖರ್ಚನ್ನು ಮಾಡುತ್ತಾ ಇಲ್ಲ. ನಾವೆಯೂ ವಿಮಾನಬಲವೂ ನಮ್ಮ ದೇಶದಲ್ಲಿ ಇಲ್ಲವೆಂದೇ ಹೇಳಬಹುದು. ಮತ್ತು ಯುದ್ಧಕ್ಕೆ ಬೇಕಾದ ವಿಮಾನ, ಮದ್ದುಗುಂಡು ಮೊದಲಾದ ಸಾಮಗ್ರಿಗಳನ್ನು ತಯಾರಿಸಲು ಇಲ್ಲಿಯವರೆಗೂ ನಮ್ಮ ಸರ್ಕಾರ ಸರಿಯಾದ ಪ್ರಯತ್ನವನ್ನು ಮಾಡಿಲ್ಲವೆಂದೇ ಹೇಳಬೇಕು. ಈ ಮೂರು ವಿಧವಾದ ಖರ್ಚುಗಳು ರಕ್ಷಣೆಗೆ ಅತ್ಯಾವಶ್ಯಕವಾದುವು. ಇವುಗಳಿಗಾಗಿ ನಾವೇ ಖರ್ಚನ್ನು ಮಾಡದೆ ಪರದೇಶವನ್ನು ರಕ್ಷಣೆಗಾಗಿ ನಂಬಿಕೊಂಡಿದ್ದೇವೆ. ಹೀಗೆ ಇತರರನ್ನು ನಂಬಿಕೊಂಡಿರದೆ ನಾವೇ ಖರ್ಚುಮಾಡಿದಪಕ್ಷಕ್ಕೆ ಈಗ ನಾವು ರಕ್ಷಣೆಗೋಸ್ಕರ ಖರ್ಚುಮಾಡುತ್ತಿರುವುದು ಸಾಕಾಗುವುದಿಲ್ಲ. ಆದರೆ ಈಗ ಮಾಡುತ್ತಿರುವ ಖರ್ಚಿನ ರೀತಿಯು ಕೆಲವು ವಿಷಯಗಳಲ್ಲಿ ಸಮಂಜಸವಾಗಿಲ್ಲ. ಮುಖ್ಯವಾಗಿ ನಮ್ಮ ಸೈನ್ಯದಲ್ಲಿ ಒಂದಕ್ಕೆ ನಾಲ್ಕರಷ್ಟು ಸಂಬಳಗಳನ್ನು ತೆಗೆದುಕೊಳ್ಳುವ ಪಾಶ್ಚಾತ್ಯ ಸೈನಿಕರಿರುವುದರಿಂದ ನಮ್ಮ ದೇಶಕ್ಕೆ ಅಷ್ಟು ಉಪಕಾರವಿಲ್ಲ. ಇದಕ್ಕೆ ಬದಲಾಗಿ ನಮ್ಮ ದೇಶದ ಸೈನಿಕರನ್ನೇ ತರಬೇತು ಮಾಡಿದರೆ ದೇಶಕ್ಕೆ ಉಪಯೋಗ ಹೆಚ್ಚಿ ಖರ್ಚು ಕಡಮೆಯಾಗುವುದು. ಇದೇ ರೀತಿ ನಮ್ಮ ಬಡತನಕ್ಕೆ ತಕ್ಕಂತೆ ಈಗಿರುವ ಹೆಚ್ಚಿನ ಸಂಬಳಗಳನ್ನು ಕೊಂಚಮಟ್ಟಿಗೆ ಕಡಮೆ ಮಾಡಿದರೆ ರಾಜ್ಯಾಡಳಿತದ ಖರ್ಚೂ ಕಡಮೆಯಾಗುವುದು. ಹೀಗೆ ಖರ್ಚನ್ನು ಕಡಮೆಮಾಡುವ ರೀತಿಗಳನ್ನು ಸರ್ಕಾರದವರು ಆಗಲೇ ಎಷ್ಟೋ ಮಟ್ಟಿಗೆ ಆಚರಣೆಗೆ ತಂದಿರುತ್ತಾರೆ. ಕೇಂದ್ರಸರ್ಕಾರದವರು ರೈಲುಗಳ ಮೇಲೆ ಮಾಡಿರುವ ಖರ್ಚು ಬಹಳಮಟ್ಟಿಗೆ ಆದಾಯಕರವಾಗಿ ಇತ್ತೀಚಿನತನಕ ಸರ್ಕಾರಕ್ಕೆ

ವರ್ಷಕ್ಕೆ ಸುಮಾರು ೫ ಕೋಟಿ ರೂಪಾಯಿಗಳ ವರೆಗೆ ವರಮಾನ ಬರುತ್ತಿತ್ತು.

ಪ್ರಾಂತಿಕ ಸರ್ಕಾರಗಳವರು ಸುಮಾರು ೧೮ ಕೋಟಿ ರೂಪಾಯಿಗಳನ್ನು ಸಮಾಜ ಸೇವೆಗೂ, ೨೬ ಕೋಟಿ ರೂಪಾಯಿಗಳನ್ನು ಆರ್ಥಿಕಾಭಿವೃದ್ಧಿಗೂ, ೩೪ ಕೋಟಿ ರೂಪಾಯಿಗಳನ್ನು ಪೋಲೀಸ್ ಮೊದಲಾದ ರಕ್ಷಣೆಯ ಸಿಬ್ಬಂದಿಗೂ ರಾಜ್ಯಾಡಳಿತಕ್ಕೂ ಖರ್ಚುಮಾಡುತ್ತಾರೆ. ಈ ಖರ್ಚುಗಳು ಕೆಲವು ವರುಷಗಳಿಂದೀಚೆಗೆ, ಮುಖ್ಯವಾಗಿ ೩೫-೩೬ನೆಯ ಇಸವಿಯಲ್ಲಿ ಪ್ರಾಂತಿಕ ಸ್ವಾತಂತ್ರ್ಯ ಬಂದಾಗಿನಿಂದೀಚೆಗೆ ಬಹಳ ಹೆಚ್ಚುತ್ತಿದೆ. ಆದರೂ ಅವುಗಳನ್ನು ಅನೇಕ ವಿಧಗಳಲ್ಲಿ ಉತ್ತಮ ಪಡಿಸಲು ಅವಕಾಶವಿದೆ. ಮುಖ್ಯವಾಗಿ ಪ್ರಜಾ ಸೌಖ್ಯವನ್ನು ಹೆಚ್ಚಿಸುವ ಅಂದಾಜನ್ನು ದೂರಾಲೋಚನೆಯಿಂದ ಮಾಡುತ್ತಿಲ್ಲ. ಈಗ ಮಾಡುತ್ತಿರುವ ಖರ್ಚೂ ಕೂಡ ಹೆಚ್ಚಾಗಿ ಪಟ್ಟಣವಾಸಿಗಳಿಗಾಗಿಯೂ ಅಲ್ಪ ಸ್ವಲ್ಪ ಕೈಗಾರಿಕೆಗಳಿಗಾಗಿಯೂ ವಿನಿಯೋಗವಾಗುತ್ತಿದೆ. ನಮ್ಮ ದೇಶಕ್ಕೆ ಬೆಂಬಲವಾದ ವ್ಯವಸಾಯ ಮತ್ತು ಗ್ರಾಮೋದ್ಧಾರ ಕೆಲಸಗಳ ಮೇಲೆ ತಕ್ಕಷ್ಟು ಖರ್ಚು ಮಾಡುತ್ತಿಲ್ಲ. ರೈಲಿಗಾಗಿ ಖರ್ಚು ಮಾಡಿರುವಷ್ಟು ನೀರಾವರಿಯ ಕೆಲಸಗಳಿಗಾಗಿ ಮಾಡಿಲ್ಲ. ವಿದ್ಯಾಭ್ಯಾಸಕ್ಕಾಗಿಯೂ ರೋಗನಿವಾರಣೆಗಾಗಿಯೂ ತಕ್ಕಷ್ಟು ವೆಚ್ಚಮಾಡುತ್ತಿಲ್ಲ.

ಇದೂ ಅಲ್ಲದೆ ಎಲ್ಲಾ ಪ್ರಾಂತಗಳಲ್ಲಿಯೂ ಒಂದೇ ಸಮನಾದ ಖರ್ಚನ್ನು ಮಾಡಲು ಅವಕಾಶವಾಗಿಲ್ಲ. ಬಿಹಾರಿನಲ್ಲಿ ತಲೆ ಒಂದಕ್ಕೆ ರೂ. ೧—೮—೦ ಯನ್ನೂ ಬಂಗಾಳದಲ್ಲಿ

ಸುಮಾರು ರೂ.೧-೪-೦ಯನ್ನೂ ಬೊಂಬಾಯಿನಲ್ಲಿ ಸುಮಾರು ರೂ. ೬-೧೦-೦ ಯನ್ನೂ ಸರ್ಕಾರಗಳು ಖರ್ಚುಮಾಡುತ್ತವೆ. ಇಂಥಾ ವ್ಯತ್ಯಾಸಗಳಿಂದ ಕೆಲವು ಪ್ರಾಂತಗಳೂ ಅಲ್ಲಿನ ಪ್ರಜೆಗಳೂ ಉನ್ನತ ಸ್ಥಿತಿಗೆ ಬಂದು, ಮತ್ತೆ ಕೆಲವು ಪ್ರಾಂತ ಗಳೂ ಅಲ್ಲಿಯ ಜನರೂ ಹಿಂದುಳಿಯುತ್ತಾರೆ. ಹೀಗಿರುವುದು ದೇಶಕ್ಕೆ ಕ್ಷೇಮಕರವಲ್ಲ. ಎಲ್ಲಾ ಪ್ರಾಂತಗಳೂ ಸಮಸಮನಾಗಿ ಒಂದೇರೀತಿಯಲ್ಲಿ ಮುಂದುವರಿಯಬೇಕು. ಈಗ ಪ್ರಾಂತಗಳು ಪ್ರಜಾಸೇವೆಗಾಗಿ ಬಹಳ ಖರ್ಚುಮಾಡದಿರುವುದಕ್ಕೆ ಮುಖ್ಯ ಕಾರಣ ಅವುಗಳ ಆದಾಯ ಅಲ್ಪವಾಗಿರುವುದೇ. ಕೆಲವು ಪ್ರಾಂತಗಳಿಗೆ ಬಹಳ ಕಡಮೆ ವರಮಾನ ಇರುವುದಲ್ಲದೆ ಅವು ಗಳ ಖರ್ಚುಗಳು ವರ್ಷೇ ವರ್ಷೇ ಹೆಚ್ಚುವುವೂ ಆಗಿವೆ. ಇದಕ್ಕೆ ತಕ್ಕಂತೆ ಆದಾಯವನ್ನು ಹೆಚ್ಚಿಸುವ ಶಕ್ತಿಯು ಅವುಗ ಳಿಗಿಲ್ಲ. ಭೂಕಂದಾಯ, ಆಬ್ಕಾರಿ, ಕೋರ್ಟು ಸ್ಟಾಂಪುಗಳು ಮುಂತಾದವುಗಳ ಆದಾಯವೇ ಪ್ರಾಂತಿಕ ಸರಕಾರಗಳಿಗೆ ಮುಖ್ಯವಾದ ಆದಾಯ. ಇದನ್ನು ಬಹಳಮಟ್ಟಿಗೆ ಹೆಚ್ಚಿಸಲು ಸಾಧ್ಯವಿಲ್ಲ. ವರಮಾನದ ತೆರಿಗೆ ಆಮದು ಮತ್ತು ರಫ್ತುಗಳ ಮೇಲೆ ತೆರಿಗೆ-ಇವು ಹೆಚ್ಚು ಆದಾಯದಾಯಕಗಳಾದವು. ಇವು ಗಳನ್ನು ಕೇಂದ್ರ ಸರ್ಕಾರವೇ ಉಪಯೋಗಿಸುತ್ತದೆ. ಹೀಗೆ ಖರ್ಚಿನ ಬಾಬುಗಳು ಹೆಚ್ಚಾಗಿ ಆದಾಯದ ಬಾಬುಗಳು ಕಡಿಮೆಯಾಗಿರುವುದರಿಂದ ಸಮಾಜ ಸೇವೆಗಾಗಿ ಪ್ರಾಂತಗಳು ವಿಶೇಷವಾಗಿ ಖರ್ಚುಮಾಡುವುದು ಸರಿಯಲ್ಲ.

ಈ ಪರಿಸ್ಥಿತಿ ಉತ್ತಮಗೊಳ್ಳಬೇಕಾದರೆ ಕೆಲವು ಸೂತ್ರ ಗಳನ್ನು ಅನುಸರಿಸಬೇಕು. ಮೊದಲನೆಯದಾಗಿ ಕೇಂದ್ರ ಮತ್ತು ಪ್ರಾಂತಿಕ ಸರ್ಕಾರದ ಆದಾಯ ಮತ್ತು ಖರ್ಚಿನ

ರೀತಿಗಳು ಒಂದನ್ನೊಂದು ಅನುಸರಿಸುವಂತೆ ಏರ್ಪಾಡು ಮಾಡ
ಬೇಕು. ಸಮಾಜದ ಸೇವೆಯ ಖರ್ಚು ಬೆಳದಂತೆಲ್ಲಾ ಪ್ರಾಂತ
ಸರ್ಕಾರಕ್ಕೆ ಕೇಂದ್ರ ಸರ್ಕಾರವು ತನ್ನ ಆದಾಯದಲ್ಲಿ ಕೆಲವು
ಭಾಗವನ್ನು ಕೊಡಬೇಕು. ಮೈಸೂರು ಸರ್ಕಾರವು ಮಾಡುತ್ತಿರು
ವಂತೆ ಲಾಭದಾಯಕವಾದ ಕೈಗಾರಿಕೆಗಳನ್ನು ಸ್ವತಃ ಕೈಕೊಂಡು
ಸರ್ಕಾರದ ವರಮಾನವನ್ನು ಹೆಚ್ಚಿಸಿಕೊಳ್ಳಬೇಕು. ಇದೂ ಅಲ್ಲದೆ
ಪರದೇಶದವರಿಗೆ ಬದಲಾಗಿ ನಮ್ಮ ದೇಶದವರಿಗೇ ಸಾಧ್ಯ
ವಾದಷ್ಟು ಸರ್ಕಾರಿ ನೌಕರಿಗಳನ್ನು ಕೊಟ್ಟರೆ ಕೆಲವು ವಿಧಗಳಲ್ಲಿ
ರಾಜ್ಯಾಡಳಿತದ ಖರ್ಚು ಕಡಮೆಯಾಗಿ ಪ್ರಜಾಸೇವೆಗೆ ಹಣ
ದೊದಗಬಹುದು.

ಈ ವಿಧವಾಗಿ ಹೆಚ್ಚು ವರಮಾನವನ್ನು ಸಂಪಾದಿಸಿ ಪ್ರಜಾ
ಸೌಖ್ಯಕ್ಕೆ ಹೆಚ್ಚು ಖರ್ಚು ಮಾಡಬಹುದಲ್ಲದೆ ಈಗ ಇರುವ
ತೆರಿಗೆಯ ಕ್ರಮಗಳನ್ನು ಬದಲಾಯಿಸುವುದರಿಂದಲೂ ಸಮಾಜದ
ಸೌಖ್ಯ ವನ್ನು ಹೆಚ್ಚಿಸಬಹುದು. ಸರ್ಕಾರದ ಆದಾಯವನ್ನು
ಪ್ರತ್ಯಕ್ಷವಾದ ತೆರಿಗೆಯಿಂದ ಹೆಚ್ಚಾಗಿ ಧನಿಕರಿಂದ ವಸೂಲು
ಮಾಡಬೇಕು. ಪರೋಕ್ಷವಾದ ತೆರಿಗೆಗಳನ್ನು, ಅದರಲ್ಲೂ ಜೀವ
ನಕ್ಕೆ ಆವಶ್ಯಕವಾದ ಉಪ್ಪು, ಬೆಂಕಿಕಡ್ಡಿ, ಮೊದಲಾದ
ಪದಾರ್ಥಗಳ ಮೇಲೆ ಹಾಕುವ ತೆರಿಗೆಗಳನ್ನು ಕಡಮೆ ಮಾಡಿದರೆ
ಸಮಾಜದ ಸೌಖ್ಯ ಹೆಚ್ಚುತ್ತದೆ.

ನಮ್ಮ ದೇಶದಲ್ಲಾದರೂ ಪರೋಕ್ಷವಾದ ತೆರಿಗೆಗಳಿಂದಲೇ
ಸರ್ಕಾರಕ್ಕೆ ಆದಾಯವು ಹೆಚ್ಚಾಗಿ ಬರುವುದರಿಂದ ತೆರಿಗೆಯ
ಹೊರೆಯು ಹೊರುವವನ ಶಕ್ತಿಗೆ ಮೀರಿದುದಾಗಿರುತ್ತದೆ. ಇದು
ಸರಿಯಲ್ಲ. ಇದನ್ನು ಬದಲಾಯಿಸಿ ಪ್ರತ್ಯಕ್ಷ ತೆರಿಗೆಗಳನ್ನು ಹೆಚ್ಚಿಸಿ,

ಪರೋಕ್ಷ ತೆರಿಗೆಗಳನ್ನು ಕಡಮೆಮಾಡಿದರೆ ಪ್ರಜಾ ಸೌಖ್ಯವು ಹೆಚ್ಚಿ ಸರ್ಕಾರದ ಆದಾಯವೂ ಹೆಚ್ಚುವ ಸಂಭವವುಂಟು.

ಮೇಲೆ ಹೇಳಿದಂತೆ ಕೇಂದ್ರ ಮತ್ತು ಪ್ರಾಂತ ಸರ್ಕಾರಗಳ ಖರ್ಚಿನ ರೀತಿಯು ಸಮರ್ಪಕವಾಗಿಲ್ಲವಾದರೂ ನಮ್ಮ ಬಡತನಕ್ಕೆ ಸರ್ಕಾರದ ಈಗಿನ ಆಯವ್ಯಯದ ರೀತಿಯೊಂದೇ ಕಾರಣವೆಂಬ ವಾದ ಮಾತ್ರ ಸಾಧುವಲ್ಲ.

---

# ಅಧ್ಯಾಯ ೭

## ಮೈಸೂರಿನ ವೆಚ್ಚ

ನಮ್ಮ ಸಂಸ್ಥಾನವು ಪ್ರಗತಿಹೊಂದುತ್ತಿರುವ ಸಂಸ್ಥಾನಗಳಲ್ಲಿ ಮಾದರಿಯಾದುದೆಂದು ಪ್ರಪಂಚದಲ್ಲೆಲ್ಲಾ ಪ್ರಸಿದ್ಧಿಹೊಂದಿದೆ. ಇದಕ್ಕೆ ಅದರ ಸರ್ಕಾರದ ಆಯವ್ಯಯದ ರೀತಿನೀತಿಗಳು ಬಹುಮಟ್ಟಿಗೆ ಕಾರಣವಾಗಿವೆ. ಸಾರ್ವಜನಿಕಖರ್ಚಿನ ಸ್ವಾರಸ್ಯವು ನಮ್ಮ ಸರ್ಕಾರದ 'ಬಡ್ಜೆಟ್' ಮತ್ತು ಲೆಖ್ಖಾಚಾರಗಳ ಪಟ್ಟಿಯನ್ನು ನೋಡಿದರೆ ತಿಳಿಯುವುದಿಲ್ಲ; ಏಕೆಂದರೆ ಇವು ಬಹಳ ತೊಡಕಾಗಿವೆ. ನಮಗೆ ಉಪಯುಕ್ತವಾದ ಕೆಲವು ಅಂಕೆಗಳನ್ನು

ಮಾತ್ರ ಬೇರೆ ರೀತಿಯಲ್ಲಿ ವಿಂಗಡಿಸಿದರೆ ಮೈಸೂರಿನ ಖರ್ಚಿನ* ವೈವಿಧ್ಯ ಹೊರಬೀಳುವುದು.

ಮೈಸೂರು ಸರ್ಕಾರದ ಆದಾಯವೆಚ್ಚಗಳು ಕೂಡ ಈ ಕೆಳಗೆ ಕಂಡಂತೆ ಹೆಚ್ಚುತ್ತಿವೆ.

| ಇಸವಿ | ಆದಾಯ | ವರ್ಷವರ್ಷವೂ ಬರುವ ಆದಾಯದಿಂದಲೇ ನಡೆಸಬಹುದಾದ ಖರ್ಚು | ವರ್ಷದ ಆದಾಯದಿಂದಲೇ ನೀಚಲಾಗದೆ ಬಂಡವಾಳವನ್ನು ಕೂಡಿಸಲು ಮಾಡುವ ಖರ್ಚು |
|---|---|---|---|
| | ಲಕ್ಷ ರೂಪಾಯಿಗಳು | ಲಕ್ಷ ರೂಪಾಯಿಗಳು | ಲಕ್ಷ ರೂಪಾಯಿಗಳು |
| ೧೯೧೦-೧೧ | ೨೪೬·೭೩ | ೧೯೯·೧೪ | ೪·೬೯ |
| ೧೯೨೦-೨೧ | ೩೧೩·೧೦ | ೩೨೭·೮೫ | ೧೧೦·೯೨ |
| ೧೯೩೦-೩೧ | ೩೩೨ ೩೫ | ೩೯೪·೨೯ | ೯೨·೮೨ |
| ೧೯೩೭-೩೮ | ೩೯೫·೫೪ | ೩೯೪·೫೫ | ೭೦·೧೨ |
| ೧೯೩೯-೪೦ | ೩೯೫·೫೮ | ೩೯೫·೧೨ | ೧೨೦·೮೭ |

ಆದಾಯವ್ಯಯಗಳು ಹೆಚ್ಚಲು ಮುಖ್ಯಕಾರಣ ಸಂಸ್ಥಾನವು ಪ್ರಗತಿಪರವಾಗಿರುವುದೇ. ಈಗ್ಗೆ ಸುಮಾರು ಮೂವತ್ತು ವರುಷಗಳ ಕೆಳಗೆ ವಿದ್ಯುಚ್ಛಕ್ತಿಯ ಸರಬರಾಯಿ ಹೊರತು

---

*ಸಮಾಜಸೌಖ್ಯಕ್ಕೋಸ್ಕರ ಸರ್ಕಾರ ಮಾತ್ರವಲ್ಲದೆ ಜಿಲ್ಲಾಬೋರ್ಡು, ಮ್ಯುನಿಸಿಪಾಲಿಟಿ, ಗ್ರಾಮಪಂಚಾಯತಿ ಮೊದಲಾದ ಸ್ಥಳೀಯ ಸಂಸ್ಥೆಗಳೂ ಬಹಳವಾಗಿ ಖರ್ಚುಮಾಡುತ್ತವೆ. ಆದರೆ ಈ ಸಂಸ್ಥೆಗಳು ಮಾಡುವ ಖರ್ಚುಗಳು ಗೊತ್ತಾಗಿ ತಿಳಿಯುವುದಕ್ಕಾಗದೆ ಇರುವುದರಿಂದ ಹೋಲಿಕೆಗೋಸ್ಕರ ಸರ್ಕಾರವು ಮಾಡುವ ಖರ್ಚನ್ನು ಮಾತ್ರ ಇಲ್ಲಿ ಕೊಟ್ಟಿದೆ.

ಮಿಕ್ಕ ಆರ್ಥಿಕಾಭಿವೃದ್ಧಿಯ ಕೈಗಾರಿಕೆಗಳನ್ನು ಸರ್ಕಾರವು ಕೈಕೊಂಡಿರಲಿಲ್ಲ. ವಿದ್ಯಾಭ್ಯಾಸ ಆರೋಗ್ಯ ಮುಂತಾದ ಸಮಾಜಸೇವೆಯ ಕೆಲಸಗಳಿಗೆ ಹೆಚ್ಚಾಗಿ ವೆಚ್ಚಮಾಡುತ್ತಿರಲಿಲ್ಲ. ಈಗಲಾದರೋ ನಮ್ಮ ಸರ್ಕಾರವು ಕೈಕೊಳ್ಳದಿರುವ ಅಥವಾ ಉತ್ತೇಜನ ಕೊಡದಿರುವ ಕೈಗಾರಿಕೆಗಳೇ ಕಡಮೆ. ಕಬ್ಬಿಣ, ಪಿಂಗಾಣಿಸಾಮಾನು, ಗಂಧದೆಣ್ಣೆ, ಸಾಬೂನು, ರೇಷ್ಮೆ ಮೊದಲಾದ ಕಾರ್ಖಾನೆಗಳು ಸರ್ಕಾರದ ವೆಚ್ಚದಿಂದಲೇ ಸ್ಥಾಪಿತವಾಗಿವೆ. ಸಕ್ಕರೆ, ಹತ್ತಿಯಬಟ್ಟೆ, ಸೀಮೆಗೊಬ್ಬರ, ಕಾಗದ ಮೊದಲಾದ ಕಾರ್ಖಾನೆಗಳ ಬಂಡವಾಳಕ್ಕೆ ಸರ್ಕಾರವು ಬಹಳಮಟ್ಟಿಗೆ ಹಣವೊದಗಿಸಿವೆ. ಕೃಷ್ಣರಾಜಸಾಗರ, ತಿಪ್ಪಗೊಂಡನಹಳ್ಳಿ, ಶಿಂಷಾಕಟ್ಟೆ, ಅರ್ವಿನ್ ಕಾಲುವೆ ಮೊದಲಾದ ನೀರಾವರಿ ಕಾರ್ಯಗಳಿಗೆ ಹಿಂದೆ ಮಾಡುತ್ತಿದ್ದುದಕ್ಕಿಂತ ಬಹಳವಾಗಿ ಈಗ ಖರ್ಚುಮಾಡುತ್ತಿದೆ. ಪ್ರಜೆಗಳ ವಿದ್ಯಾಭ್ಯಾಸ ಆರೋಗ್ಯರಕ್ಷಣೆಗಳಿಗೆ ಒಂದಕ್ಕೆ ನಾಲ್ಕರಷ್ಟು ಈಗ ಖರ್ಚಾಗುತ್ತಿದೆ. ಈ ನಾನಾಕಾರಣಗಳಿಂದ ಮೈಸೂರು ಸರ್ಕಾರದ ವೆಚ್ಚವು ಈಚೆಗೆ ಬಹಳವಾಗಿ ಹೆಚ್ಚಿದೆ.

**ಪಾಲನೆಯ ಖರ್ಚು**—ಶತ್ರುಭಯವು ಆಶ್ರಿತಸಂಸ್ಥಾನವಾದ ಮೈಸೂರಿಗೆ ಕಡಮೆಯಾದುದರಿಂದ ಒಂದುವಿಧದಲ್ಲಿ ರಕ್ಷಣಾವ್ಯಯವು ಕಡಮೆಯೇ. ತಾನೇ ನೇರವಾಗಿ ಸೈನ್ಯಕ್ಕಾಗಿ ಖರ್ಚುಮಾಡುವುದು ಕಡಮೆಯಾದರೂ ಪರೋಕ್ಷವಾಗಿ ಅದು ಮಾಡುವ ಖರ್ಚು ಗಣ್ಯವಾದುದಾಗಿದೆ. ೧೯೩೭-೮ ರಲ್ಲಿ ಸಂಸ್ಥಾನದ ಸೈನ್ಯದ ಖರ್ಚಿಗೆ ಸುಮಾರು ೧೫ ಲಕ್ಷ ರೂಪಾಯಿಗಳನ್ನೂ ಬ್ರಿಟಿಷರಿಗೆ ಪೊಗದಿಯ ರೂಪದಲ್ಲಿ ೨೪॥ ಲಕ್ಷ ರೂಪಾಯಿಗಳನ್ನೂ ವ್ಯಯಮಾಡಿತು. ೧೮೮೧ ರಲ್ಲಿ ಮೈಸೂರಿ

ನಲ್ಲಿ ಪುನಃ ಒಡೆಯರ ಆಳಿಕೆ ಸ್ಥಾಪಿತವಾದಾಗ ಅಲ್ಲಿಂದ ಈಚೆಗೆ ಬ್ರಿಟಿಷ್‌ಸರ್ಕಾರವು ನಮ್ಮ ರಾಜ್ಯದ ರಕ್ಷಣೆಗೋಸ್ಕರ ಪೊಗದಿಯನ್ನು ತೆಗೆದುಕೊಳ್ಳುವುದಾಗಿ ನಿಷ್ಕರ್ಷಿಸಿತು. ಇಂದಿನವರೆಗೂ ಈ ಒಪ್ಪಂದವು ನಡೆದುಬಂದು ೧೮೯೬ ರ ವರೆಗೆ ವರ್ಷಕ್ಕೆ ೨೪|| ಲಕ್ಷ ರೂಪಾಯಿಗಳನ್ನೂ ಅಲ್ಲಿಂದ ೧೯೨೭ ರ ವರೆಗೆ ೩೫ ಲಕ್ಷ ರೂಪಾಯಿಗಳನ್ನೂ ೧೯೨೭ರಿಂದ ೧೯೩೮ ರ ವರೆಗೆ ೨೪|| ಲಕ್ಷ ರೂಪಾಯಿಗಳನ್ನೂ ಈಗ ೧೯ ಲಕ್ಷ ರೂಪಾಯಿಗಳನ್ನೂ ಸಲ್ಲಿಸುತ್ತಿದ್ದೇವೆ. ಇದುವರೆಗೆ ೧೭ ಕೋಟಿಗಿಂತ ಹೆಚ್ಚಾಗಿ ಪೊಗದಿಯನ್ನು ಕೊಟ್ಟಿದ್ದೇವೆ. ಉಪ್ಪು, ಆಮದು ರಪ್ತು, ಸೀಮೆಯೆಣ್ಣೆ ಮೊದಲಾದುವುಗಳಮೇಲೆ ಹಾಕಿರುವ ತೆರಿಗೆಗಳಿಂದಲೂ ಬ್ರಿಟಿಷ್ ನಾಣ್ಯದ ಚಲಾವಣೆಯಿಂದಲೂ ಮೈಸೂರಿನಿಂದ ಬ್ರಿಟಿಷ್‌ಸರ್ಕಾರಕ್ಕೆ ಪ್ರತಿವರ್ಷವೂ ೧.೫ ಕೋಟಿಗಿಂತ ಹೆಚ್ಚಾಗಿ ಸಂದಾಯವಾಗುತ್ತಿರುವುದರಿಂದ ಬ್ರಿಟಿಷ್‌ಸರ್ಕಾರವೇ ಈ ಪೊಗದಿಯನ್ನು ಅನ್ಯಾಯವೆಂದು ಅರಿತು ಆದಷ್ಟು ಜಾಗ್ರತೆಯಾಗಿ ಅದನ್ನು ವಜಾಮಾಡುವುದಾಗಿ ವಾಗ್ದಾನಮಾಡಿದೆ.

ಬ್ರಿಟಿಷರದಲ್ಲದೆ ನಮ್ಮ ಸರ್ಕಾರವೂ ತನ್ನದೇ ಒಂದು ಸೈನ್ಯವನ್ನು ಇಟ್ಟುಕೊಂಡಿದೆ. ೧೯೧೦-೧೧ ರಲ್ಲಿ ಈ ಸೈನ್ಯದ ಸಂಖ್ಯೆ ೩೦೦೦ವಿದ್ದುದು ೧೯೩೭-೩೮ ರಲ್ಲಿ ೧೪೦೦ ಕ್ಕೆ ಇಳಿಯಿತು. ಈ ಸೈನ್ಯದ ಮೇಲೆ ಈ ಕೆಳಗೆ ಕಂಡಂತೆ ಖರ್ಚನ್ನು ಮಾಡಿರುತ್ತಾರೆ:

| | | |
|---|---|---|
| ೧೯೧೦-೧೧ | — | ೧೩ ೩ ಲಕ್ಷ ರೂ. |
| ೧೯೩೦-೩೧ | — | ೧೭.೧ ,, |
| ೧೯೩೭-೩೮ | — | ೧೪.೮ ,, |
| ೧೯೩೯-೪೦ | — | ೭.೨೫ ,, |

ಇದಕ್ಕೆ ಪೊಗದಿಯನ್ನು ಸೇರಿಸಿದರೆ ಒಟ್ಟು ರಕ್ಷಣೆಯ ಖರ್ಚು ಕೆಳಗೆ ಕಂಡಂತೆ ಆಗುತ್ತದೆ.

| ಇಸವಿ | ಖರ್ಚು | ಒಟ್ಟು ಖರ್ಚಿನಲ್ಲಿ ಶೇಕಡ |
|---|---|---|
| ೧೯೧೦-೧೧ | ೪೮.೩ ಲಕ್ಷ ರೂ | ೨೪% |
| ೧೯೩೦-೩೧ | ೪೧.೬ ,, | ೮% |
| ೧೯೩೭-೩೮ | ೩೩.೯ ,, | ೯% |
| ೧೯೩೯-೪೦ | ೨೬.೩ ,, | ೫% |

ಈ ಪಟ್ಟಿಯಿಂದ ನಮ್ಮ ಸರ್ಕಾರವು ಸೈನ್ಯಕ್ಕಾಗಿ ಅತ್ಯಲ್ಪವಾಗಿ ವ್ಯಯಮಾಡುತ್ತಿದೆಯೆಂಬುದು ತಿಳಿಯಬರುತ್ತದೆ.

ರಕ್ಷಣೆಗೋಸ್ಕರವಲ್ಲದೆ ಒಳದೇಶದ ಶಾಂತಿಗಾಗಿ ಪೋಲೀಸ್ ಸಿಬ್ಬಂದಿ, ಕೋರ್ಟು, ಜೈಲು ಮೊದಲಾದುವುಗಳಮೇಲೆ ಮಾಡುವ ಖರ್ಚಿನ ವಿವರ ಹೀಗಿದೆ:

| ಇಸವಿ | ಕೋರ್ಟು | ಪೋಲೀಸ್ | ಜೈಲು | ಒಟ್ಟು | ಒಟ್ಟು ಖರ್ಚಿನಲ್ಲಿ ಶೇಕಡ |
|---|---|---|---|---|---|
| | ಲಕ್ಷ ರೂ | ಲಕ್ಷ ರೂ. | ಲಕ್ಷರೂ | ಲಕ್ಷ ರೂ. | |
| ೧೯೧೦-೧೧ | ೭.೫ | ೯.೪ | ೧.೨ | ೧೮.೧ | ೯% |
| ೧೯೩೦-೩೧ | ೧೧.೫ | ೧೩.೩ | ೧.೦ | ೩೧ ೮ | ೮% |
| ೧೯೩೭-೩೮ | ೧೧.೫ | ೧೯.೭ | ೧ ೨ | ೩೨.೪ | ೮% |
| ೧೯೩೯-೪೦ | ೧೨.೨ | ೨೧.೬ | ೧ ೨ | ೩೪.೮ | ೮% |

೧೯೧೦-೧೧ ರಲ್ಲಿ ೧೫೦ ಕೋರ್ಟುಗಳಿದ್ದವು. ೧೯೩೭-೩೮ ರಲ್ಲಿ ಕೋರ್ಟುಗಳ ಸಂಖ್ಯೆಯು ೧೧೦ ಕ್ಕೆ ಇಳಿಯಿತು. ಹೀಗೆಯೇ ಪೋಲೀಸ್ ಸಿಬ್ಬಂದಿಯ ಸಂಖ್ಯೆಯೂ ಕೂಡ ಹಿಂದೆ ಇದ್ದುದಕಿಂತ ಹೆಚ್ಚಾಗಿಲ್ಲ. ಆದರೂ ವೆಚ್ಚವು ಹೆಚ್ಚಿದೆ.

ಇದಕ್ಕೆ ನೌಕರರುಗಳ ಸಂಬಳವನ್ನು ಹೆಚ್ಚಿಸಿದುದೂ ಮತ್ತು ಈ ಇಲಾಖೆಗಳ ಪುನರ್ರಚನೆ ಮಾಡಿದುದೂ ಮುಖ್ಯಕಾರಣ ಗಳಾಗಿವೆ.

ರಾಜ್ಯಾಡಳಿತದ ಖರ್ಚು ಮತ್ತೊಂದು ಖರ್ಚಿನ ಬಾಬು. ಈ ಬಾಬಿನಲ್ಲಿ ಮುಜರಾಯಿ ಇಲಾಖೆ ಮತ್ತು ಇತರ ಚಿಲ್ಲರೆ ಇಲಾಖೆಗಳ ಖರ್ಚೂ ಸೇರಿದೆ.

| ಇಸವಿ | ವೆಚ್ಚ | ಒಟ್ಟು ಖರ್ಚಿನಲ್ಲಿ ಶೇಕಡ |
|---|---|---|
| ೧೯೧೦-೧೧ | ೩೪ ಲಕ್ಷ ರೂ.ಗಳು | ೧೨.೭% |
| ೧೯೩೦-೩೧ | ೪೨.೫ ,, | ೧೦.೮% |
| ೧೯೩೭-೩೮ | ೪೯.೯ ,, | ೧೨ ೮% |

ಈ ಬಾಬಿನಲ್ಲಿ ನಮ್ಮ ಸರ್ಕಾರವು ಬ್ರಿಟಿಷ್ ಸರ್ಕಾರಕ್ಕಿಂತಲೂ ಕಡಮೆ ಖರ್ಚು ಮಾಡುತ್ತದೆ. ಉದಾಹರಣೆಗಾಗಿ ಸಾಧಾರಣ ಆಡಳಿತದ ಖರ್ಚು ಮದರಾಸು ಮತ್ತು ಬೊಂಬಾಯಿ ಪ್ರಾಂತಗಳಲ್ಲಿ ಈ ಕೆಳಗೆ ಕಂಡಂತೆ ಮೈಸೂರಿನ ಮೂರರಷ್ಟಿದೆ.

## ಒಟ್ಟು ವೆಚ್ಚದಲ್ಲಿ ಸಾಧಾರಣ ಆಡಳಿತದ ವೆಚ್ಚದ ಪ್ರಮಾಣ (ಶೇಕಡ)

| ಇಸವಿ | ಮೈಸೂರು | ಬೊಂಬಾಯಿ | ಮದರಾಸು |
|---|---|---|---|
| ೧೯೨೫-೨೬ | ೪.೩% | ೧೩.೮% | ೧೫.೯% |
| ೧೯೩೦-೩೧ | ೪.೧% | ೧೩.೮% | ೧೫.೯% |
| ೧೯೩೬-೩೭ | ೩.೯% | ೮.೩% | ೧೬.೯% |

ಆಡಳಿತದಲ್ಲಿ ದಕ್ಷತೆಯೂ ಖರ್ಚಿನಲ್ಲಿ ಬಿಗಿಯೂ, ಅಧಿಕಾರಗಳಿಗೆ ದೇಶೀಯರನ್ನೇ ನೇಮಿಸಿರುವುದೂ ಯಾರಿಗೂ ಮಿತಿಮೀರಿ ಸಂಬಳ ಕೊಡದೆ ಇರುವುದೂ ನಮ್ಮ ಸಂಸ್ಥಾನದ ಕಡಿಮೆ ಖರ್ಚಿಗೆ ಮುಖ್ಯ ಕಾರಣಗಳು.

ಆಡಳಿತದ ಖರ್ಚಿನಂತೆಯೇ ಮುಖ್ಯವಾದ ಮತ್ತೆರಡು ಖರ್ಚುಗಳು ಯಾವುವೆಂದರೆ ಅರಮನೆಗೆ ಸಂಬಂಧವಾದದ್ದು ಮತ್ತು ಸಾಲದ ಮೇಲಿನ ಬಡ್ಡಿ. ೧೯೩೭-೩೮ ರಲ್ಲಿ ಸರ್ಕಾರದ ಸಾಲವು ಸುಮಾರು ೧೫ ಕೋಟಿ ರೂ. ಗಳಾಗಿದ್ದು ಅದರ ಮೇಲಿನ ಬಡ್ಡಿಯ ನಿವ್ವಳಮೊತ್ತವು (Net amount) ೪೨ ಲಕ್ಷ ರೂಪಾಯಿಗಳಾಗಿದ್ದವು. ಈ ಬಡ್ಡಿಯು ಕೆಳಗೆ ಕಂಡಂತೆ ಬೆಳೆದಿದೆ.

| ಇಸವಿ | ಬಡ್ಡಿಗಾಗಿ ವೆಚ್ಚ | ಒಟ್ಟು ಖರ್ಚಿನಲ್ಲಿ ಶೇಕಡ |
|---|---|---|
| ೧೯೨೦-೨೧ | ೧೧ ಲಕ್ಷ | ೩.೫ % |
| ೩೦-೩೧ | ೩೪ ,, | ೯.೦ % |
| ೩೭-೩೮ | ೪೨ ,, | ೧೧.೦ % |
| ೩೯-೪೦ | ೪೬ ,, | ೧೨.೦ % |

ಸಾಲವಾಗಲಿ ಬಡ್ಡಿಯಾಗಲಿ ಬಹಳವಾಗಿರುವಂತೆ ಕಂಡರೂ ನಿಜವಾಗಿ ಭಾರವಾಗಿಲ್ಲ. ಈ ಸಾಲವು ನಮ್ಮ ಸಂಸ್ಥಾನದಲ್ಲಿ ತಲೆಗೆ ೨೩ ರೂ. ಗಳು ಮಾತ್ರ. ಬ್ರಿಟಿಷ್ ಇಂಡಿಯಾದಲ್ಲಿ ತಲೆಗೆ ೪೪ ರೂ. ಗಳೂ ರಷ್ಯಾದಲ್ಲಿ ೪೫ ರೂ. ಗಳೂ ಅಮೇರಿಕಾದಲ್ಲಿ ೮೪೦ ರೂ. ಗಳೂ ಇಂಗ್ಲೆಂಡಿನಲ್ಲಿ ೨೫೦೦ ರೂ.ಗಳೂ ಆಗಿವೆ. ಇದೂ ಅಲ್ಲದೆ ಮೈಸೂರಿನ ಸಾಲವೆಲ್ಲವೂ ಲಾಭದಾಯಕ

ರೀತಿಯಲ್ಲಿ ಉಪಯೋಗಿಸಲ್ಪಟ್ಟಿದೆ. ರೈಲು, ವಿದ್ಯುಚ್ಛಕ್ತಿ, ನೀರಾವರಿ, ಕಾರ್ಖಾನೆಗಳು ಇವುಗಳಿಗೋಸ್ಕರ ಸರ್ಕಾರವು ಸಾಲ ಮಾಡಿದೆಯೇ ಹೊರತು ಯುದ್ಧಕ್ಕಾಗಲಿ ಮದ್ದುಗುಂಡಿಗಾಗಲಿ ಸಾಲಮಾಡಿಲ್ಲ. ಪ್ರಪಂಚದಲ್ಲಿ ಮತ್ತೆ ಯಾವ ರಾಜ್ಯದಲ್ಲೂ ಮೈಸೂರಿನಲ್ಲಿರುವಂತೆ ಲಾಭದಾಯಕ ಕಾರ್ಯಗಳಿಗಾಗಿಯೇ ಸಾಲಮಾಡಿಲ್ಲ. ಈಗಾಗಲೇ ಈ ಬಾಬುಗಳಲ್ಲಿ ಅನೇಕವು ಬಡ್ಡಿ ಮಾತ್ರವಲ್ಲದೆ ಲಾಭವನ್ನೂ ತರುತ್ತಿವೆ. ಶೀಘ್ರದಲ್ಲಿಯೇ ಎಲ್ಲಾ ಬಾಬುಗಳೂ ಹೆಚ್ಚುಹೆಚ್ಚಾಗಿ ಲಾಭವನ್ನು ತರುವುದರಲ್ಲಿ ಸಂದೇಹವಿಲ್ಲ.

ಮೇಲೆ ಹೇಳಿದ ಖರ್ಚುಗಳೆಲ್ಲಾ ಮೈಸೂರಿನ ಆಯವ್ಯಯದ ರೀತಿಯಲ್ಲಿ ಅಷ್ಟು ಮುಖ್ಯವಾದುವಲ್ಲ. ಸಮಾಜ ಸೇವೆಯ ಖರ್ಚು ಮೈಸೂರಿನಲ್ಲಿ ಮುಖ್ಯವಾದುದು. ವಿದ್ಯಾಭಿವೃದ್ಧಿಯು ಸರ್ಕಾರದ ಒಂದು ಮುಖ್ಯ ಧ್ಯೇಯವಾಗಿ ಇದಕ್ಕೋಸ್ಕರ ಬಹಳವಾಗಿ ಖರ್ಚಾಗುತ್ತಿದೆ.

## ವಿದ್ಯಾಭ್ಯಾಸದ ವೆಚ್ಚ

| ಇಸವಿ | ಒಟ್ಟು ವೆಚ್ಚ | ಒಟ್ಟು ವೆಚ್ಚದಲ್ಲಿ ಶೇಕಡ |
|---|---|---|
| ೧೯೧೦-೧೧ | ೧೮·೭ ಲಕ್ಷ | ೯% |
| ೩೦-೩೧ | ೬೯·೦ ,, | ೧೭% |
| ೩೭-೩೮ | ೬೫.೦ ,, | ೧೭% |
| ೩೯-೪೦ | ೫೬.೯ ,, | ೧೪% |

ಒಟ್ಟು ಖರ್ಚಿನಲ್ಲಿ ಶೇ|| ೧೭ ರಷ್ಟು ಮೈಸೂರಿನವರೂ ೧೫ರಷ್ಟು ಮದರಾಸಿನವರೂ ೧೩ರಷ್ಟು ಮಾತ್ರ ಬೊಂಬಾಯಿ

ನವರೂ ವಿದ್ಯಾಭ್ಯಾಸಕ್ಕಾಗಿ ಖರ್ಚುಮಾಡುತ್ತಾರೆ. ಈ ವಿಷಯದಲ್ಲಿ ನಮ್ಮ ಖರ್ಚಿನ ಶ್ರೇಷ್ಠತೆಯನ್ನು ಇನ್ನೊಂದು ವಿಧವಾಗಿ ನೋಡಬಹುದು. ೧೯೩೬-೩೭ನೆಯ ಇಸವಿಯ ವಿದ್ಯಾಭ್ಯಾಸದ ಒಟ್ಟು ಖರ್ಚಿನಲ್ಲಿ ಸರ್ಕಾರ ಮತ್ತು ಇತರ ಸಂಸ್ಥೆಗಳು ಕೊಡುವ ಹಣದ ವಿವರ ಹೀಗಿದೆ.

| | ಮೈಸೂರು | ಮದರಾಸು | ಬೊಂಬಾಯಿ |
|---|---|---|---|
| ಸರ್ಕಾರ | ೭೯.೯ | ೪೫-೭ | ೪೧ |
| ಫೀಸು | ೮.೧ | ೧೮-೧ | ೨೪ |
| ಇತರ | ೧೨.೦ | ೩೬.೨ | ೩೫ |

ಇದರಿಂದ ವಿದ್ಯಾಭ್ಯಾಸಕ್ಕಾಗಿ ಆಗುವ ಖರ್ಚಿನ ಹೆಚ್ಚು ಭಾಗವನ್ನು ಸರ್ಕಾರದವರು ವಹಿಸಿರುತ್ತಾರೆಂಬುದು ವ್ಯಕ್ತವಾಗುತ್ತದೆ. ಈ ಭಾರವು ವರ್ಷವರ್ಷಕ್ಕೂ ಹೆಚ್ಚುತ್ತಿದೆ. ೧೯೧೦ರಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಗೂ ೧೬.೫ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದು ೧೯೩೭ರಲ್ಲಿ ೧೯.೫ ರೂಪಾಯಿಗಳನ್ನು ಖರ್ಚು ಮಾಡಿತು· ಪ್ರಾಥಮಿಕ ವಿದ್ಯಾಭ್ಯಾಸದಿಂದ ವಿಶ್ವವಿದ್ಯಾನಿಲಯದವರೆಗೂ ಎಲ್ಲಾ ತರದ ವಿದ್ಯಾಭ್ಯಾಸಕ್ಕೂ ಹೆಚ್ಚು ಹೆಚ್ಚಾಗಿ ಹಣ ಉಪಯೋಗವಾಗುತ್ತಿದೆ.

ದೇಶದ ಏಳಿಗೆಗೆ ಆಡಿಗಲ್ಲಾದ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಹೆಚ್ಚಾದ ಗಮನ ಸಂದಿದೆ. ಈ ಶಾಲೆಗಳು ೧೯೧೦ ರಲ್ಲಿ ೨೦೦೦ಕ್ಕಿಂತ ಕಡಮೆಯಿದ್ದವು. ೧೯೩೮ ರಲ್ಲಾದರೊ ೬೦೦೦ಕ್ಕೆ ಮೀರಿದ್ದವು. ೧೯೧೦ ರಲ್ಲಿ ೨೯೦೦ ಪ್ರಜೆಗಳಿಗೆ ಒಂದು ಶಾಲೆಯಿತ್ತು. ೧೯೩೮ ರಲ್ಲಿ ಸರಾಸರಿ ೧೧೦೦ ಜನಕ್ಕೆ ಒಂದು ಶಾಲೆಯಾಯಿತು. ೧೯೧೦ ರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ

೩.೫ಲಕ್ಷ ರೂ. ಖರ್ಚಾಗುತ್ತಿದ್ದು ೧೯೩೮ರಲ್ಲಿ ೨೩ ಲಕ್ಷಕ್ಕೆ ಏರಿತು. ಇದರಿಂದ ಶಾಲೆಗೆ ಹೋಗುವ ಮಕ್ಕಳ ಸಂಖ್ಯೆಯು ಶೇಕಡ ೧೬ ರಿಂದ ೩೬ ಕ್ಕೆ ಹೆಚ್ಚಿತು. ಈ ಶಾಲೆಗಳಿಗೆ ಮಾತ್ರ ವಲ್ಲದೆ ಕಲಾಶಾಲೆಗಳಿಗೂ ವೃತ್ತಿ ಶಿಕ್ಷಣಕ್ಕೂ ಸೌಕರ್ಯ ಗಳನ್ನು ಹೆಚ್ಚುಮಾಡಿ ಉಪಾಧ್ಯಾಯರುಗಳಿಗೆ ಹೆಚ್ಚು ಸಂಬಳ ಗಳನ್ನು ಕೊಟ್ಟು ಶಾಲೆಗಳಲ್ಲಿ ದಕ್ಷತೆಯನ್ನು ಹೆಚ್ಚಿಸುವುದಕ್ಕೂ ಬಹಳವಾಗಿ ಖರ್ಚು ಮಾಡುತ್ತಿದ್ದಾರೆ. ಪ್ರಜೆಗಳೆಲ್ಲರಿಗೂ ಉಚಿತವಾಗಿ ಪ್ರಾಥಮಿಕ ವಿದ್ಯಾಭ್ಯಾಸವನ್ನಾದರೂ ಕೊಡ ಬೇಕೆಂಬ ಧ್ಯೇಯವು ಸರ್ಕಾರಕ್ಕೆ ಇದೆ. ಹಾಗೆ ಮಾಡಬೇಕಾದರೆ ವರ್ಷಕ್ಕೆ ೬೦ ಲಕ್ಷ ರೂಪಾಯಿಗಳು ಖರ್ಚಾಗುವುವು. ದ್ರವ್ಯಾಭಾವದಿಂದ ಸದ್ಯಕ್ಕೆ ಇದು ಸಾಧ್ಯವಿಲ್ಲದಾಗಿದೆ.

ವಿದ್ಯಾಭ್ಯಾಸದಂತೆಯೇ ಆರೋಗ್ಯ ರಕ್ಷಣೆಯೂ ಮುಖ್ಯ ವಾದುದು. ಮೈಸೂರಿನಲ್ಲಿ ಈ ಬಾಬಿನ ಖರ್ಚು ಈರೀತಿ ಇದೆ:

| ಇಸವಿ | ಖರ್ಚು | ಒಟ್ಟು ಖರ್ಚಿನಲ್ಲಿ ಶೇಕಡ |
|---|---|---|
| ೧೯೧೦-೧೧ | ೭.೨ ಲಕ್ಷ | ೩.೬% |
| ೩೦-೩೧ | ೧೨.೪ ,, | ೩.೧% |
| ೩೭-೩೮ | ೧೮-೨ ,, | ೪.೬% |
| ೩೯-೪೦ | ೧೯-೪ ,, | ೫.೦% |

ಅಂದರೆ ತಲೆಗೆ ರೂ. ೦-೩-೨ ಗಳನ್ನು ನಮ್ಮ ಸರ್ಕಾರವು ಖರ್ಚುಮಾಡುತ್ತದೆ. ಮದರಾಸಾಧಿಪತ್ಯದಲ್ಲಿ ೦-೨-೭, ಬೊಂ ಬಾಯಿ ಆಧಿಪತ್ಯದಲ್ಲಿ ೦-೪-೯ ಖರ್ಚಾಗುತ್ತದೆ. ನಾವು ಮಾಡುವ ಖರ್ಚು ಬೊಂಬಾಯಿಗಿಂತ ಕಡಮೆಯಾದರೂ ಪ್ರಜೆ

ಗಳಿಗೆ ಹೆಚ್ಚಿನ ಉಪಯೋಗವಾಗುವಂತೆ ಇಲ್ಲಿ ಏರ್ಪಾಡು ಮಾಡಲಾಗಿದೆ. ಮೈಸೂರಿನಲ್ಲಿ ಸರಾಸರಿ ೨೩,೦೦೦ ಪ್ರಜೆಗಳಿಗೆ ಒಂದು ಆಸ್ಪತ್ರೆಯಿದೆ. ಬೊಂಬಾಯಿಯಲ್ಲಿ ೭೬,೦೦೦ ಪ್ರಜೆಗಳಿಗೆ ಒಂದು ಇದೆ. ಮದರಾಸಿನಲ್ಲಿ ೪೦,೦೦೦ ಕ್ಕೆ ಒಂದು ಇದೆ. ಈ ಖರ್ಚಿನಿಂದಾಗುವ ಪ್ರಯೋಜನವು ಸಾವಿನ ಸಂಖ್ಯೆಯಿಂದ ತಿಳಿಯಬಹುದು.

**ಸಾವಿನ ಸಂಖ್ಯೆ (ಸಾವಿರಕ್ಕೆ)**

| ಇಸವಿ | ಮೈಸೂರು | ಮದರಾಸು | ಬೊಂಬಾಯಿ |
|---|---|---|---|

೧೯೪೦ ರಲ್ಲಿ ನಮ್ಮ ಸರ್ಕಾರವು ಆರೋಗ್ಯರಕ್ಷಣೆಗಾಗಿ ತಲೆಗೆ ೦-೪-೬ ಗಳಂತೆ ಖರ್ಚುಮಾಡಿದೆ, ೨೦,೦೦೦ ಪ್ರಜೆಗಳಿಗೆ ಒಂದರಂತೆ ಆಸ್ಪತ್ರೆಗಳನ್ನು ಏರ್ಪಡಿಸಿದೆ.

**ಆರ್ಥಿಕಾಭಿವೃದ್ಧಿ**—ಆರ್ಥಿಕಾಭಿವೃದ್ಧಿಗೋಸ್ಕರ ಸರ್ಕಾರವು ಮಾಡುತ್ತಿರುವ ಖರ್ಚು ಮೈಸೂರಿನಲ್ಲಿ ಅತಿ ಮುಖ್ಯವಾದುದು. ಕೈಗಾರಿಕೆ, ಕಾರ್ಖಾನೆಗಳಿಗೂ ವ್ಯವಸಾಯ, ಸಹಕಾರ ಮೊದಲಾದ ಇಲಾಖೆಗಳಿಗೂ ಬಹಳವಾಗಿ ವೆಚ್ಚಮಾಡುತ್ತದೆ. ಈ ಇಲಾಖೆಗಳಿಗೆ ೧೯೧೦ ನೆಯ ಇಸವಿಯಲ್ಲಿ ೧.೫ ಲಕ್ಷ ರೂ. ಗಳನ್ನೂ ೧೯೩೬ ರಲ್ಲಿ ೧೩.೫ ಲಕ್ಷ ರೂ. ಗಳನ್ನೂ ಖರ್ಚುಮಾಡಿತು. ವ್ಯವಸಾಯದ ರೀತಿಯನ್ನು ಉತ್ತಮಗೊಳಿಸುವುದೂ ಗ್ರಾಮಕೈಗಾರಿಕೆಗಳಿಗೆ ಉತ್ತೇಜನ ಕೊಡುವುದೂ ಈ ಖರ್ಚಿನ ಮುಖ್ಯ ಉದ್ದೇಶ.

ಇದಕ್ಕಿಂತಲೂ ಹೆಚ್ಚಾಗಿ ಸರ್ಕಾರವು ಲಕ್ಷೋಪಲಕ್ಷ ರೂಪಾಯಿಗಳನ್ನು ದೊಡ್ಡ ದೊಡ್ಡ ಲಾಭದಾಯಕ ಕೆಲಸಗಳಿಗಾಗಿ ವ್ಯಯಮಾಡುತ್ತಿದೆ. ಹೀಗೆ ಮಾಡುವ ಖರ್ಚನ್ನು ಎರಡು ವಿಧಗಳಾಗಿ ವಿಂಗಡಿಸಬಹುದು. ಮೊದಲನೆಯದು ಸರ್ಕಾರವು ತಾನೇ ಸ್ವಂತವಾಗಿ ಕೈಕೊಳ್ಳುವುದು. ಇದು ಕೆಳಗೆ ಕಂಡಂತೆ ಸುಮಾರು ೧೭ ಕೋಟಿ ರೂಪಾಯಿಗಳಷ್ಟಾಗುವುದು.

## ೧೯೩೮ ನೆಯ ಇಸವಿಯವರೆಗೆ ಬಂಡವಾಳ

| | |
|---|---|
| ರೈಲು ಮತ್ತು ಟ್ರಾಂವೆಗಳು | ೬೪೨ ಲಕ್ಷ |
| ವಿದ್ಯುಚ್ಛಕ್ತಿ ಮತ್ತು ನೀರಾವರಿ | ೭೯೪ ,, |
| ಕಬ್ಬಿಣ ಮತ್ತು ಸಿಮೆಂಟ್ | ೧೯೪ ,, |
| ಇತರ | ೧೧೬ ,, |

ಈ ಖರ್ಚು ಆರ್ಥಿಕಾಭಿವೃದ್ಧಿಗೆ ಎಷ್ಟು ಸಹಾಯಕವೆಂಬುದನ್ನು ಹೇಳಬೇಕೇ? ಇವುಗಳಲ್ಲಿ ಕೆಲವು (ಕಬ್ಬಿಣ, ವಿದ್ಯುಚ್ಛಕ್ತಿ) ಕೈಗಾರಿಕೆಗಳೆಲ್ಲಕ್ಕೂ ಅಡಿಗಲ್ಲುಗಳು (Key industries). ಮತ್ತೆ ಕೆಲವು (ರೈಲು ಮತ್ತು ಟ್ರಾಂವೆಗಳು) ಸಾರ್ವಜನಿಕ ಸೌಖ್ಯಕ್ಕೆ (Public utilities) ಮೂಲಕಾರಣವಾದುವು. ಇವೆಲ್ಲವೂ ಲಾಭದಾಯಕ. ಎರಡನೆಯದು ಬಹಳಮಟ್ಟಿಗೆ ಬಂಡವಾಳವನ್ನು ಕೊಟ್ಟು ಪ್ರಜೆಗಳೇ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕೆ ಸಹಾಯಮಾಡುವುದು. ಉದಾಹರಣೆ: ಮಂಡ್ಯದ ಸಕ್ಕರೆ ಕಾರ್ಖಾನೆ, ಕೃಷ್ಣರಾಜೇಂದ್ರ ಮಿಲ್ಲು, ಕಾಗದದ ಕಾರ್ಖಾನೆ ಮುಂತಾದವು. ಸಕ್ಕರೆ ಕಾರ್ಖಾನೆಯ ೨೦ ಲಕ್ಷ ರೂಪಾಯಿಗಳ ಬಂಡವಾಳದಲ್ಲಿ ೧೨ ಲಕ್ಷ ರೂಪಾಯಿಗಳು ಸರ್ಕಾರವು ಹಾಕಿರುವ ಬಂಡವಾಳ.

ಆರ್ಥಿಕಾಭಿವೃದ್ಧಿಗೆ ಅಂಗವಾಗಿ ರಸ್ತೆ, ಸೇತುವೆ, ಕೆರೆಕಟ್ಟೆಗಳು ಮುಂತಾದುವುಗಳಿಗೆ ಸರ್ಕಾರವು ಖರ್ಚುಮಾಡುತ್ತಿದೆ. ೧೯೨೦ ರಿಂದ ೩೭ ನೆಯ ಇಸವಿಯವರೆಗೆ ಕೆರೆಕಟ್ಟೆಗಳಿಗೋಸ್ಕರ ೨೮೩ ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿದ್ದಲ್ಲದೆ ಬಂಡವಾಳದ ಖರ್ಚಿಗಾಗಿ (Capital Expenditure) ಪ್ರತಿವರ್ಷವೂ ಲಕ್ಷಾಂತರ ರೂಪಾಯಿಗಳನ್ನುವೆಚ್ಚಮಾಡುತ್ತಿದೆ.

ಕೆರೆಕಟ್ಟೆಗಳಿಂದ ವ್ಯವಸಾಯವು ಅಭಿವೃದ್ಧಿಹೊಂದುತ್ತದೆ, ರಸ್ತೆಗಳಿಂದ ವ್ಯಾಪಾರವು ಹೆಚ್ಚುವುದಲ್ಲದೆ ಹಳ್ಳಿಗಳೂ ಪಟ್ಟಣಗಳಿಗೂ ಸಂಬಂಧ ಬೆಳೆದು ಹಳ್ಳಿಗಳು ಪ್ರಗತಿಪರವಾಗುತ್ತವೆ. ಕಟ್ಟಡಗಳಿಂದ ಸೌಕರ್ಯಮಾತ್ರವಲ್ಲದೆ ಸೌಂದರ್ಯವೂ ಹೆಚ್ಚುತ್ತದೆ.

ಈ ಮೇಲೆ ಮಾಡಿದ ಪರಿಶೀಲನೆಯಿಂದ ಮೈಸೂರಿನ ಸಾರ್ವಜನಿಕವೆಚ್ಚದಲ್ಲಿ ಒಂದು ಮುಖ್ಯಾಂಶವು ವ್ಯಕ್ತವಾಗುತ್ತದೆ. ಸಮಾಜಸೇವೆಗೂ ಆರ್ಥಿಕಾಭಿವೃದ್ಧಿಗೂ ಮಾಡುವ ಖರ್ಚು ವಿಶೇಷವಾಗಿದೆ; ಇದು ವರ್ಷವರ್ಷಕ್ಕೂ ಬೆಳೆಯುತ್ತಿದೆ. ಆದರೆ ಸಾರ್ವಜನಿಕವೆಚ್ಚದ ಒರೆಗಲ್ಲು ಖರ್ಚಿನ ಮೊತ್ತವಲ್ಲ. ತಲೆಗೆ ಬೀಳುವ ಖರ್ಚು, ಅದರ ರೀತಿ ಮತ್ತು ಹಂಚಿಕೆ ಈ ಒರೆಗಲ್ಲಿನಿಂದ ಮೈಸೂರಿನ ವೆಚ್ಚವನ್ನು ಪರೀಕ್ಷಿಸೋಣ.

## ತಲೆಗೆ ಬೀಳುವ ಖರ್ಚು ೧೯೩೯-೪೦

| | ರೂ. ಅ. ಪೈ. | |
|---|---|---|
| ಮೈಸೂರು | ೭—೧೪—೧೦ | (ಇವರಲ್ಲಿ ರೂ. ೧-೧೨-೧೦ |
| ಮದರಾಸು | ೩—೧೦—೧೦ | ಬಂಡವಾಳಕ್ಕಾಗಿ ಹಾಕಿದ ಹಣ |

| | |
|---|---|
| ಒಟ್ಟು ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳು | ೨— ೨— ೫ |

ಇದರಿಂದ ನಮ್ಮ ಸರ್ಕಾರದವರು ಪ್ರಜೆಗಳಿಗೋಸ್ಕರ ಬ್ರಿಟಿಷ್ ಪ್ರಾಂತಗಳಿಗಿಂತ ಎರಡರಷ್ಟು ಖರ್ಚು ಮಾಡುತ್ತಾರೆಂದು ಗೊತ್ತಾಗುತ್ತದೆ.

## ಖರ್ಚಿನ ರೀತಿ

| | ಮೈಸೂರು | ಮದರಾಸು | ಒಟ್ಟು ಬ್ರಿಟಿಷ್ ಇಂಡಿಯಾಪ್ರಾಂತಗಳು |
|---|---|---|---|
| | ರೂ. ಆ. ಪೈ. | ರೂ. ಆ. ಪೈ. | ರೂ. ಆ. ಪೈ. |
| ಪಾಲನೆ | ೩—೭—೬ | ೧— ೪—೬ | ೧— ೩—೦ |
| ಸಮಾಜ ಸೇವೆ | ೧—೦—೬ | ೦—೧೪—೦ | ೦—೧೧—೨ |
| ಆರ್ಥಿಕಾಭಿವೃದ್ಧಿ ಮತ್ತು ಇತರ | ೪—೬—೯ | ೧— ೮—೪ | ೧— ೬—೩ |

ಇದರಿಂದ ನಮ್ಮ ಸರ್ಕಾರವು ಸಮಾಜಸೇವೆ ಮತ್ತು ಆರ್ಥಿಕಾಭಿವೃದ್ಧಿ ಮೊದಲಾದುವುಗಳಿಗೆ ಎಷ್ಟು ಹೆಚ್ಚಾಗಿ ವ್ಯಯ ಮಾಡುತ್ತದೆ ಎಂಬುದು ತಿಳಿಯುತ್ತದೆ. ಮೈಸೂರಿನ ಪಾಲನೆಯ ಖರ್ಚಿನಲ್ಲಿ ಸುಮಾರು ತಲೆಗೊಂದು ರೂಪಾಯಿನಷ್ಟು ಪ್ರೊಗದಿ, ಸೈನ್ಯ ಮತ್ತು ಅರಮನೆ ವೆಚ್ಚಗಳು ಸೇರಿವೆ. ಇವು ಬ್ರಿಟಿಷ್ ಪ್ರಾಂತಗಳಲ್ಲಿಲ್ಲವೆಂಬುದು ನೆನಪಿನಲ್ಲಿಡಬೇಕು. ತಲೆಗೆ ಬೀಳುವ ಖರ್ಚಿನಲ್ಲಿ ಮಾತ್ರವಲ್ಲದೆ ವೆಚ್ಚದ ರೀತಿಯಲ್ಲಿಯೂ ಕೂಡ ನಮ್ಮ ಸರ್ಕಾರವೇ ಬಹಳ ಮುಂದುವರಿದಿದೆ.

ಈಗ ಮೈಸೂರಿನ ಆದಾಯದ ರೀತಿಯನ್ನು ಪರೀಕ್ಷಿಸಿ ನೋಡೋಣ. ಮುಖ್ಯವಾಗಿ ತೆರಿಗೆ ಸಿಸ್ತಿನ ಗುಣದೋಷಗ

ಳನ್ನು ಕಂಡುಹಿಡಿಯ ಬೇಕಾದರೆ ಈ ವಿಷಯಗಳನ್ನು ಜ್ಞಾಪಕ ದಲ್ಲಿಡಬೇಕು—ಪ್ರತ್ಯಕ್ಷವಾದ ತೆರಿಗೆಗಳಿಂದ ಬರುವ ಆದಾಯ ವೆಷ್ಟು, ಪರೋಕ್ಷವಾದ ತೆರಿಗೆಗಳಿಂದ ಬರುವುದೆಷ್ಟು. ಸಮಾಜ ಸೌಖ್ಯವು ಹೆಚ್ಚಬೇಕಾದರೆ ಪ್ರತ್ಯಕ್ಷವಾದ ತೆರಿಗೆಗಳೇ ದೇಶದಲ್ಲಿ ಮುಖ್ಯವಾಗಿರಬೇಕು. ವರಮಾನ, ಆಸ್ತಿ—ಇವುಗಳು ಹೆಚ್ಚಿ ದಂತೆಲ್ಲ ತೆರಿಗೆಯ ದರವೂ ಹೆಚ್ಚಬೇಕು. ತೀರ ಬಡವರ ಮೇಲೆ ತೆರಿಗೆ ಹಾಕಬಾರದು. ಪ್ರತ್ಯಕ್ಷ ತೆರಿಗೆಗಳಲ್ಲಿಯೂ ಕೂಡ ವರಮಾನದ ತೆರಿಗೆ, ದಾಯಭಾಗದ ಮೇಲಿನ ತೆರಿಗೆ ಮುಂತಾ ದುವು ಹೆಚ್ಚಾಗಿದ್ದು ತಲೆಗಂದಾಯ, ಆಸ್ತಿಯ ತೆರಿಗೆ ಮೊದ ಲಾದುವು ಕಡಮೆಯಾಗಿರಬೇಕು. ಪರೋಕ್ಷ ತೆರಿಗೆಗಳಲ್ಲಿ ಸೇಂದಿ, ಭೋಗಸಾಮಗ್ರಿ—ಇವುಗಳ ಮೇಲಿನ ತೆರಿಗೆಗಳು ಹೆಚ್ಚಾ ಗಿದ್ದು ಉಪ್ಪು, ಸಕ್ಕರೆ, ಮುಂತಾದ ಆಹಾರಸಾಮಗ್ರಿಗಳ ಮೇಲೆ ಸುಂಕಗಳು ಕಡಮೆಯಾಗಿರಬೇಕು. ಹೀಗಿದ್ದರೆ ತೆರಿ ಗೆಯ ಭಾರವನ್ನು ಪ್ರಜೆಗಳ ಶಕ್ತಿಗೆ ತಕ್ಕಂತೆ ಹೊರಿಸಿದಂತಾಗು ವುದು. ಈ ದೃಷ್ಟಿಯಿಂದ ಮೈಸೂರಿನ ತೆರಿಗೆಯ ರೀತಿಯು ಬಹಳ ಮಟ್ಟಿಗೆ ಮೇಲಾಗಿದೆ.

**ಆದಾಯದಲ್ಲಿ ಬೇರೆ ಬೇರೆ ತೆರಿಗೆಗಳ ಪ್ರಮಾಣ (ಶೇಕಡ)**

| ದೇಶ | ಪ್ರತ್ಯಕ್ಷ | ಪರೋಕ್ಷ | ಒಟ್ಟು | ಇತರ |
|---|---|---|---|---|
| ಮೈಸೂರು | ೩೭·೨ | ೨೩ ೬ | ೬೦ ೮ | ೩೯·೧ |
| ಮದರಾಸು | ೩೦.೧ | ೪೩.೯ | ೭೩.೦ | ೨೭.೦ |
| ಇತರ ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳು | ೩೪·೩ | ೩೫·೩ | ೬೯·೬ | ೩೦·೮ |

ತೆರಿಗೆಗಳನ್ನು ಹಾಕದೆಯೇ ನಮ್ಮ ಸರ್ಕಾರವು ಬಹಳವಾಗಿ ಹಣ ಸಂಪಾದಿಸುತ್ತಿದೆ. ತೆರಿಗೆಗಳಲ್ಲೂ ಪ್ರತ್ಯಕ್ಷ ತೆರಿಗೆಗಳೇ ಮುಖ್ಯವಾಗಿವೆ. ಬ್ರಿಟಿಷ್‌ಪ್ರಾಂತಗಳಲ್ಲಿ ತೆರಿಗೆಯನ್ನು ಬಿಟ್ಟು ಬೇರೆ ವಿಧಗಳಿಂದ ಬರುವ ವರವಮಾನ ಕಡಮೆಯಾಗಿರುವುದಲ್ಲದೆ ಪರೋಕ್ಷ ತೆರಿಗೆಗಳೇ ಮುಖ್ಯವಾಗಿವೆ. ಪರೋಕ್ಷ ತೆರಿಗೆಗಳಲ್ಲಿ ಮಾದಕದ್ರವ್ಯಗಳ ಮೇಲಿನ ತೆರಿಗೆಯೇ ಮೈಸೂರಿನಲ್ಲಿ ಪ್ರಾಮುಖ್ಯವಾದುದು. ಆಹಾರಸಾಮಗ್ರಿಗಳ ಸುಂಕವು ಅಷ್ಟೇನೂ ಹೆಚ್ಚಾಗಿಲ್ಲ.

ಅಂದರೆ ಬಹಳಮಟ್ಟಿಗೆ ಮೈಸೂರಿನ ಸಾರ್ವಜನಿಕ ಆಯ ವ್ಯಯಗಳ ಕ್ರಮವು ಪ್ರಶಂಸನೀಯವೆಂದೇ ಹೇಳಬೇಕು. ಆದರೆ ಇದು ಇನ್ನೂ ಉತ್ತಮಗೊಳ್ಳಬೇಕಾದರೆ ಕೆಲವು ಬದಲಾವಣೆ ಗಳು ಆವಶ್ಯಕ. ಬಡತನ, ನಿರುದ್ಯೋಗ ಮೊದಲಾದುವುಗಳ ನಿವಾರಣೆ, ಮುದುಕರಿಗೆ ಮಾಸಾಶನ ಮುಂತಾದ ಸಮಾಜ ರೋಗನಿವಾರಣೆಯ ಬಾಬುಗಳಿಗೂ(Social insurance schemes) ವಿದ್ಯಾಭ್ಯಾಸ, ಆರೋಗ್ಯ ರಕ್ಷಣೆ—ಇವುಗಳಿಗೂ ಇನ್ನೂ ಹೆಚ್ಚಾಗಿ ಹಣವನ್ನು ಖರ್ಚುಮಾಡಬೇಕು. ಈ ವಿಷಯಗಳು ಈಗಾಗಲೇ ಮೈಸೂರಿನ ಸಾರ್ವಜನಿಕವೆಚ್ಚದ ಧ್ಯೇಯವಾಗಿದೆ. ಆದರೆ ದ್ರವ್ಯಾಭಾವದಿಂದ ಆಚರಣೆಗೆ ತರು ವುದಕ್ಕಾಗಿಲ್ಲ. ನಮ್ಮ ಆರ್ಥಿಕಾಭಿವೃದ್ಧಿಯ ಕೆಲಸಗಳು ಫಲ ಕಾರಿಯಾದರೆ ಸಾಕಾದಷ್ಟು ಹಣ ಸಿಕ್ಕುತ್ತದೆ. ಅವುಗಳು ಬೇಗನೆ ಬೆಳೆದು ಬಹಳ ಲಾಭವನ್ನು ತರಲಿ ಎಂದು ಹಾರೈಸೋಣ.



ಪ್ರಚಾರಪುಸ್ತಕಮಾಲೆಯನ್ನು ಕುರಿತು

## ಕೆಲವು ಅಭಿಪ್ರಾಯಗಳು

---

" ಜನಸಾಮಾನ್ಯಕ್ಕೆ ಗಾಢವಾದ ಆಸಕ್ತಿಯಿರುವ ವಿಷಯ ಗಳ ಮೇಲೆ ವಿಶ್ವವಿದ್ಯಾನಿಲಯದ ಅಧ್ಯಾಪಕರು ಕೊಟ್ಟ ಪ್ರಚಾರೋಪನ್ಯಾಸಗಳನ್ನು ಈ ರೀತಿಯಾಗಿ ಸ್ಥಿರರೂಪದಲ್ಲಿ ನಿಲ್ಲಿಸಬೇಕೆಂಬ ವಿಶ್ವವಿದ್ಯಾನಿಲಯದ ಈ ಪ್ರಯತ್ನವು ನನಗೆ ಮೆಚ್ಚಿಕೆಯಾಗಿದೆ. . . . ಈ ಉದ್ಯಮಕ್ಕಾಗಿ ವಿಶ್ವವಿದ್ಯಾನಿಲಯವನ್ನು ನಾನು ತುಂಬ ಆದರದಿಂದ ಅಭಿನಂದಿಸುತ್ತೇನೆ."

—ಅಮೀನ್-ಉಲ್-ಮುಲ್ಕ್
ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು.

---

" ಸ್ವಾರಸ್ಯವುಳ್ಳ ವಿಷಯಗಳನ್ನು ಕುರಿತು ಇಷ್ಟು ಸುಂದರ ವಾದ ಕೈಪಿಡಿಗಳನ್ನು ಪ್ರಕಟಿಸಿರುವುದಕ್ಕಾಗಿ ನಿಮ್ಮನ್ನು ಅಭಿ ನಂದಿಸುತ್ತೇನೆ. ಇವು ಅಚ್ಚರಿಗೊಳಿಸುವಷ್ಟು ಅಗ್ಗವಾಗಿವೆ; ಒಳ್ಳೆಯ ಮುದ್ರಣಕ್ಕೆ ಇಲ್ಲಿರುವುದಕ್ಕಿಂತ ಹೆಚ್ಚಾಗಿ ಬಯಸ ಬೇಕಾದದ್ದೇನಿದೆ ? "

—ಶ್ರೀಮಾನ್ ರಂ. ರಾ. ದಿವಾಕರ ಅವರು.

“ಇವು ಜೇಬಿನಲ್ಲಿ ಅಡಗಬಹುದಾದ ಸಣ್ಣ ಆಕಾರದಲ್ಲಿ ಮುದ್ದಾಗಿ ಅಚ್ಚಾಗಿವೆ. . . . ಆಯಾ ಶಾಸ್ತ್ರದಲ್ಲಿ ನುರಿತ ವಿದ್ವಾಂಸರು ಸಪ್ರಮಾಣವಾಗಿ, ರಸವತ್ತಾಗಿ, ಸುಲಭವಾಗಿ ಬರೆದಿರುತ್ತಾರೆ. . . .”

—‘ಪ್ರಬುದ್ಧ ಕರ್ಣಾಟಕ.’

---

“ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರು ನಡೆಸುತ್ತಿರುವ ಸಂಸ್ಕೃತಿಯ ಸಪ್ತಾಹಗಳ ಬೆಲೆಯನ್ನು ಕಟ್ಟುವುದಕ್ಕೆ ಆಗುವುದಿಲ್ಲ. ಸಂಸ್ಕೃತಿ ಪ್ರಸಾರವನ್ನು ಮೀರಿಸಿದ ಕೆಲಸ ಇನ್ನೊಂದುಂಟೆ? ಖಂಡಿತವಾಗಿಯೂ ಇಲ್ಲ. ಆದಕಾರಣ ಲಘು ಸಾಹಿತ್ಯವನ್ನು ಸಿದ್ಧಮಾಡಿಸಿ ಅವುಗಳನ್ನು ಜನಸಾಮಾನ್ಯದಲ್ಲಿ ಪ್ರಕಟಿಸುತ್ತಿರುವ ವಿಶ್ವವಿದ್ಯಾನಿಲಯದವರನ್ನು ನಾವು ಎಷ್ಟು ವಿಧವಾಗಿ ಹೊಗಳಿದರೂ ಕಡಿಮೆ. ಈ ಉಪಕಾರಕ್ಕಾಗಿ ಕನ್ನಡನಾಡಿನ ಜನರು ವಿಶ್ವವಿದ್ಯಾನಿಲಯಕ್ಕೆ ಅತ್ಯಂತ ಋಣಿಗಳಾಗಿದ್ದಾರೆ. . . . . . . . . . . . . . . . . . . . . . .

ವಿಶ್ವವಿದ್ಯಾನಿಲಯದ ಉದ್ದಿಶ್ಯವು ಇಂತಹ ಪ್ರೌಢ ಪ್ರಬಂಧಗಳಿಂದ ಸಾರ್ಥಕವಾಗುವುದರಲ್ಲಿ ಲೇಶವೂ ಸಂದೇಹವಿಲ್ಲ. ಪ್ರಚಾರಪುಸ್ತಕ ಮಾಲೆಯ ವ್ಯವಸ್ಥಾಪಕರನ್ನು ಅಭಿನಂದಿಸಲೇಬೇಕು. ಮುದ್ದಾದ ಅಚ್ಚು, ಕಟ್ಟು. ಬೆಲೆ ಕೇವಲ ೨ ಆಣೆ.”

—‘ವಿಶ್ವಕರ್ಣಾಟಕ.’

ಮೆರವಣಿಗೆ, ಕನಕಸ್ನಾನ—ಇವು ಕನ್ನಡಿಗರಲ್ಲಿ ಚಿರಪರಿಚಿತ
ವಾದ ಉತ್ಪ್ರೇಕ್ಷೆ. ಕಟ್ಟುಕಥೆ ಹೇಳುವುದರಲ್ಲಿಯೂ ಕರ್ನಾಟದವ
ರಿಗೆ ಸ್ವಶಕ್ತಿ ಸ್ವಂತಕಲ್ಪನೆ ಲುಪ್ತ. ಅದು ಹೇಗಾದರೂ ಇರಲಿ.
ಈ ಕಥೆಗಳಿಂದ ಒಂದಂಶ ಸ್ಪಷ್ಟವಾಗುತ್ತದೆ. ೧೭ ನೆಯ
ಶತಮಾನದ ಹೊತ್ತಿಗೆ ನಾರಣಪ್ಪನ ಭಾರತಕ್ಕೆ ಕನ್ನಡದೇಶದಲ್ಲಿ
ಬಹಳ ಪ್ರಶಸ್ತಿ. ಎಲ್ಲೆಲ್ಲಿಯೂ ಅದನ್ನು ಓದುವ ಗಮಕಿಗಳೇ;
ಎಲ್ಲರಿಗೂ ಅದು ಆಪ್ಯಾಯಮಾನ; ರಾಜಾಸ್ಥಾನಗಳಿಗೂ ಅದರ
ವ್ಯಾಪ್ತಿ. ಬಹುಹಿಂದಿನ ಒಂದು ಓಲೆಯಪ್ರತಿಯಲ್ಲಿ ಶಾಂತಮಲ
ಹರಿ ಬವುಳಿ ಆಹರಿ ಸಾರಂಗನಾಟಿ ಮಾಳವ ಕನ್ನಡಗೌಳ
ಕಾಂಬೋದಿ ಇತ್ಯಾದಿ ಸಂಧಿಗೊಂದೊಂದು ರಾಗ ನಿರ್ದಿಷ್ಟ
ವಾಗಿದೆ. ಕ್ರಿ. ಶ. ೧೪೩೦ ರ ಸುಮಾರು ನಾರಣಪ್ಪ ಬದುಕಿದ್ದ
ಅವಧಿಯೆಂದು ಅನೇಕರ ತೀರ್ಮಾನ.

ಹಿಂದೂದೇಶದಲ್ಲಿ ಮತಶ್ರದ್ಧೆ ಎಲ್ಲಕ್ಕಿಂತ ಅಧಿಕ. ಆದ್ದ
ರಿಂದ ನಾರಣಪ್ಪನ ಮತದ ಸಲುವಾಗಿ ನಡೆಯುತ್ತಿರುವ ಚರ್ಚೆ
ವಿಶಾಲ ಜಿಜ್ಞಾಸದ ಗೊಂಡಾರಣ್ಯವಾಗಿದೆ. ಅವನು ಭಾಗವತ
ಸಂಪ್ರದಾಯದ ವೈಷ್ಣವ ಬ್ರಾಹ್ಮಣನೆಂದು ಒಂದು ನಂಬಿಕೆ.
ಕುಮಾರವಾಲ್ಮೀಕಿ ಬೊಬ್ಬೂರು ರಂಗ ಲಕ್ಷ್ಮೀಕವಿ ಕೋನಯ್ಯ
ಮೊದಲಾದ ಬ್ರಾಹ್ಮಣಕವಿಗಳು ಮಾತ್ರ ಅವನನ್ನು ತಮ್ಮ
ಗ್ರಂಥಗಳಲ್ಲಿ ಸ್ಮರಿಸಿರುವುದರಿಂದಲೂ ಇತರ ಕಾರಣಗಳಿಂದಲೂ
ನಾರಣಪ್ಪ ಖಂಡಿತವಾಗಿ ಬ್ರಾಹ್ಮಣ. ಕನ್ನಡ ಕವಿಗಳು ಕುಂಭೀ
ಪಾಕಕ್ಕಾದರೂ ಇಳಿದಾರು, ಅನ್ಯಮತದ ಕವಿಯನ್ನು ಹೊಗಳು
ವುದಿಲ್ಲ. ಅವನನ್ನು ದ್ವೈತಿಯೆನ್ನುವುದಕ್ಕೆ ಸಾಕಾದಷ್ಟು
ಸಾಧನಗಳಿವೆಯೆಂದು ಕೆಲವರ ವಾದ; ಆದರೆ ಕಾವ್ಯದಲ್ಲಿ
ಪ್ರತ್ಯಕ್ಷವಾಗುವ ಹೇರಳ ಶಿವಸ್ತುತಿ, ಕರ್ಮಮಾರ್ಗದ ಉಪೇಕ್ಷೆ,

ವಾಯುದೇವರ ಪೂಜೆ ಮೊದಲಾದುವಿಲ್ಲದಿರುವುದು—ಇವು ದ್ವೈತವಿರುದ್ಧವೆಂದು ಇತರರ ವಾದ. ಹೋಗಲಿ; ಅದ್ವೈತಿಯೊ? ಆಹುದೆಂದು ಒಂದು ಗುಂಪಿನ ತಿಳಿವಳಿಕೆ. ಆ ಭಾವನೆಯನ್ನು ಹುಟ್ಟಿಸುವ ಪದ ವಾಕ್ಯ ಪ್ರಸ್ತಾವಗಳಿದ್ದರೂ ಆದರ ಮುಖ್ಯತತ್ತ್ವವಾದ ಜೀವಬ್ರಹ್ಮೈಕ್ಯ ಪ್ರತಿಪಾದಿತವಾಗಿಲ್ಲ; ಆದ್ದರಿಂದ ಹೇಗೆ ಅವನನ್ನು ಅದ್ವೈತಿಯೆನ್ನುವುದು?—ಇದು ಮತ್ತೊಂದು ಗುಂಪು. ಭಕ್ತಿಗೆ ಅತಿಶಯ ಪ್ರಾಧಾನ್ಯ; ಜೀವಕ್ಕೆ ಸ್ವಾತಂತ್ರ್ಯವಿಲ್ಲವೆಂಬುವರ ಮೇಲೆ ಅವಧಾರಣೆ; ವಿಷ್ವಕ್ಸೇನನ ನಾಮನಿರ್ದೇಶ: ಇವುಗಳಿಂದ ಕವಿ ಶ್ರೀವೈಷ್ಣವನಾಗಿರಬಹುದೇ ಎಂದು ಕೆಲವರ ಆಲೋಚನೆ. ಮಹೇಶ್ವರ ಮಹಾವಿಷ್ಣುಗಳ ತಾದಾತ್ಮ್ಯವನ್ನು ಹಲವುಸಾರಿ ಉಚ್ಚರಿಸುವುದರಿಂದ ಭೇದಾಭೇದವಾದದ ಭಾಗವತನೇ ಎಂದು ಮತ್ತೆ ಕೆಲವರ ಸಂದೇಹ. ಯಾವೊಂದು ಶಾಖೆಗೂ ಸ್ಫುಟವಾಗಿ ಸೇರದೆ ವೀರನಾರಾಯಣ ಸಂಕೇತದ ಪರಮಾತ್ಮನಲ್ಲಿ ಮರೆಹೊಕ್ಕ ಭಕ್ತಿಪಂಥದ ಸಂತನೇ? ಹೀಗೆ ಯಾವ ಪ್ರಶ್ನೆಯನ್ನು ಬೇಕಾದರೂ ಕೇಳಲು ಸುಲಭ; ಸರ್ವಸಮ್ಮತವಾದ ಉತ್ತರವನ್ನು ಕಂಡುಹಿಡಿಯುವುದು ಅಸಾಧ್ಯ. ಈ ವಿವಾದದಿಂದ ಒಂದು ಅನುಮೇಯ ಎದ್ದು ನಿಲ್ಲುತ್ತದೆ: ನಾರಣಪ್ಪನ ಸಕಲ ಮತ ಸಹಿಷ್ಣುತೆ, ಮತಗೋಷ್ಠಿಗಳ ಸಂಕೋಚ ನಿರ್ಬಂಧಕ್ಕೆ ಸಿಕ್ಕದ ವಿಶಾಲ ಹೃದಯ, ಮಹಾಕವಿಯೋಗ್ಯವಾದ ಪರಿಪಕ್ವ ಮನಸ್ಸು. ನಾರಣಪ್ಪನೆಂಬ ಪುರುಷನ ಮತ ಯಾವುದೇ ಆಗಿರಲಿ, ನಾರಣಪ್ಪ ಕವಿಯ ಮತ ಸರಳವಾದ್ದು, ಸುಂದರವಾದ್ದು, ಸತ್ಯವಾದ್ದು: ಕೇಶವನೆಂದರೇನು? ಕಪರ್ದಿಯೆಂದರೇನು? ಪರಾತ್ಪರ ವಸ್ತುವೊಂದೇ; ಅದು ಶಾಶ್ವತ,

ಎಲ್ಲವನ್ನೂ ಬಲ್ಲುದು, ಎಲ್ಲದರೊಳಗೂ ಕುಳಿತಿದೆ; ನಿಶ್ಚಲ ಭಕ್ತಿಯಿಂದ ಅದಕ್ಕೆ ಶರಣಾಗುವುದು ನಮ್ಮ ಕರ್ತವ್ಯ; ಅದರ ಕರುಣೆಯಿಂದ ಪ್ರೇರಣೆ ಸಹಾಯಗಳೊದಗಿ ನಮ್ಮ ಶ್ರೇಯಸ್ಸು ಸಿದ್ಧ.

ನಾರಣಪ್ಪನ ಪಾಂಡಿತ್ಯ ವಿಚಾರದಲ್ಲಿ ಎರಡು ಉಪಾಖ್ಯಾನ ಗಳಿವೆ. ಅವನು ಓದು ಬರಹ ಬಾರದವನಂತೆ. ಯಾವುದೋ ಅಧಿಕಾರಿಯ ಮನೆಯಲ್ಲಿ ಆಳಾಗಿರುವಾಗ ಅಲ್ಲಿ ನಡೆಯುತ್ತಿದ್ದ ಸಂಸ್ಕೃತ ಮಹಾಭಾರತ ಪುರಾಣವನ್ನು ಆಸಕ್ತಿಯಿಂದ ಕೇಳು ತ್ತಿದ್ದ. ಹತ್ತು ಪರ್ವ ಮುಗಿಯುವ ಹೊತ್ತಿಗೆ ಆ ಮನೆ ಬಿಟ್ಟು ಬೇರೆ ಕಡೆಗೆ ಹೋಗಬೇಕಾಯ್ತು. ಆಗ ಅವನಿಗೆ ಇದ್ದಕ್ಕಿದ್ದ ಹಾಗೆ ಕಾವ್ಯಸ್ಫೂರ್ತಿ ಉದಯಿಸಿತು. ತಾನು ಕೇಳಿದ್ದ ಭಾರತ ಭಾಗವನ್ನು ತನಗೆ ತೋರಿದ ರೀತಿಯಲ್ಲಿ ತನಗೆ ತಿಳಿದಿದ್ದ ಅಲ್ಪ ಕನ್ನಡದಲ್ಲಿ ರಚಿಸಿ ಸಹಾಯಕನೊಬ್ಬನಿಂದ ಬರೆಸಿದನಂತೆ! ಈ ಕಟ್ಟುಕಥೆಯಲ್ಲಿ ಕನ್ನಡ ಭಾರತ ಪಾಮರ ಗ್ರಂಥವೆಂಬ ಅಭಿಶಾಪ; ಕವಿ ಅನಕ್ಷರಸ್ಥನೆಂದರೆ ಅವನ ಕೀರ್ತಿ ಹೆಚ್ಚುವು ದೆಂಬ ಭ್ರಮೆ. ಇನ್ನೊಂದು ಕಥೆಯಲ್ಲಿಯೂ ನಾರಣಪ್ಪ ನಿರಕ್ಷರ ಕುಕ್ಷಿ. ಕೋಳಿವಾಡದ ಕರಣಿಕ. ತನ್ನ ದೇವರನ್ನು ಕುರಿತು ಗ್ರಂಥವೊಂದನ್ನು ರಚಿಸಲು ಅವನಿಗೆ ಅತ್ಯಂತ ತವಕ. ಒಂದು ರಾತ್ರಿ ಸ್ವಪ್ನದಲ್ಲಿ ನಾರಾಯಣ ಕಾಣಿಸಿಕೊಂಡು ಅಣತಿ ಯನ್ನಿತ್ತನು. ಅದರಂತೆ ಮಾರನೆಯ ದಿನ ನಾರಣಪ್ಪ ಹತ್ತಿರದ ಊರಿನಲ್ಲಿ ಲಕ್ಷ ಬ್ರಾಹ್ಮಣ ಸಂತರ್ಪಣೆಯಾಗುತ್ತಿದ್ದ ಕಡೆಗೆ ಹೋದ. ಅಲ್ಲಿ ಒಬ್ಬ ಹುಡುಗ ಆ ದೊನ್ನೆ ಈ ದೊನ್ನೆಯೆಂದು ರಚ್ಚೆ ಹಿಡಿದಿರಲು, ಪರಿಚಾರಕ "ಏನೋ, ನಿನಗೆ ದುರ್ಯೋ ಧನನಿಗಿಂತಲೂ ಹೆಚ್ಚು ಅಭಿಮಾನ!" ಎಂದು ಛೀಗುಟ್ಟಿದ.

ತಕ್ಷಣವೇ ಅಲ್ಲಿ ನಿಂತಿದ್ದ ಒಬ್ಬ ಬ್ರಾಹ್ಮಣನ ಕಣ್ಣಿನಿಂದ ನೀರು ತೊಟ್ಟಿಕ್ಕಿತು. ಅದನ್ನು ಈಕ್ಷಿಸಿದ ನಾರಣಪ್ಪ ಅವನನ್ನು ಚೆನ್ನಾಗಿ ದೃಷ್ಟಿಸಿ, ಸ್ವಪ್ನದಲ್ಲಿ ತನ್ನ ಸ್ವಾಮಿ ಗುರುತಿಸಿದ ವ್ಯಕ್ತಿ ಅವನೇ ಎಂದು ನಿರ್ಧರಿಸಿ, ಊಟವಾದೊಡನೆ ಅವನನ್ನು ಹಿಂಬಾಲಿಸಿದ. ಏತಕ್ಕೆಂದರೆ ಅವನೇ ಅಶ್ವತ್ಥಾಮ. ಅವನಿಂದ ಉಪದೇಶಪಡೆದು ಅವನ ಕಟ್ಟಾಜ್ಞೆಯಂತೆ ದಿನದಿನವೂ ಒದ್ದೆಬಟ್ಟೆಯಲ್ಲಿ ದೇವರ ಮುಂದೆ ನಿಂತು ತನ್ನ ಭಾರತವನ್ನು ಒರೆಯಲಾರಂಭಿಸಿದ. ಬಟ್ಟೆ ಒಣಗುವವರೆಗೂ ದೇವರ ಪ್ರಸಾದವಿರುತ್ತಿತ್ತು. ಹೀಗೆ ಹತ್ತು ಪರ್ವಗಳನ್ನು ರಚಿಸಿ ಸ್ನೇಹಿತನೊಬ್ಬನಿಂದ ಬರೆಸಿದ್ದಾಗಲು, ನಾರಣಪ್ಪನಿಗೆ ಆನಂದ ಮಿತಿಮೀರಿ, ಅಪ್ಪಣೆಯ ಕಟ್ಟು ಕಳಚಿಬಿತ್ತು. ತಡೆಯಲಾರದೆ ಅಶ್ವತ್ಥಾಮ ವೃತ್ತಾಂತದ ಗುಟ್ಟನ್ನು ಒಡನಾಡಿಗೆ ಬಯಲುಮಾಡಿಬಿಟ್ಟ. ಕೂಡಲೇ ಪರಂಧಾಮವನ್ನೈದಿದ! ಕುರುಬನೊಬ್ಬ ಕಾಳಿದಾಸನಾದ ಕಥೆಯ ರೂಪಾಂತರವಿದು. ನಿಶ್ಚಯವಾಗಿ ನಾರಣಪ್ಪ ಪ್ರಬಲಪಂಡಿತ. ಸಂಸ್ಕೃತ ಮಹಾಭಾರತವನ್ನು ಆಮೂಲಾಗ್ರವಾಗಿ ಪಠಿಸಿದ್ದ; ಶಾಸ್ತ್ರ, ಸಂಗೀತ, ಜ್ಯೋತಿಷ್ಯ, ಸ್ಮೃತಿ, ಪುರಾಣ, ಕ್ರೌಂಚ ಮುರಾರಿ ಸಾಹಿತ್ಯ, ಬಹುಶಃ ಭಾಸ, ವೇಣೀಸಂಹಾರಾದಿ ಸಂಸ್ಕೃತ ಸಾಹಿತ್ಯ, ಪಂಪಭಾರತ, ಲಕ್ಷಣಗ್ರಂಥ, ನಿಘಂಟುಗಳು ಅವನ ನಾಲಗೆಯ ತುದಿಯಲ್ಲಿದ್ದುವು. ಸಹಜ ಪ್ರತಿಭೆಯಿಂದ ಬಹು ದೊಡ್ಡವ; ಪ್ರಪಂಚಾನುಭವದಲ್ಲಿ ನಿಷ್ಣಾತ. ಅಂಥವನು ಕವಿ ಪುಂಗವನಾದುದರಲ್ಲಿ ಏನು ಕೌತುಕ?

ಇನ್ನು ಕನ್ನಡ ಭಾರತದ ಅಂತಃಪ್ರಮಾಣದಿಂದ ಸೂಚಿತವಾಗುವ ಕವಿಯ ವ್ಯಕ್ತಿತ್ವವನ್ನು ವಿಶದಪಡಿಸೋಣ. ಆ ನಾರಣಪ್ಪನೇ ನಮಗೆ ಪ್ರಿಯನಾದ ನಾರಣಪ್ಪ. ಅವನ ಪ್ರಥಮ